ಒಂದಾಣೆ ಮಾಲೆ. 117

# ಪುರಂದರ ದಾಸರು

(ಏಕಾಂಕ ನಾಟಕ)



★ ★

ರಚಯಿತರು:

ಶ್ರೀ। ಬಿ. ಪದ್ಮನಾಭ ಸೋಮಯಾಜಿ, ವಿದ್ವಾನ್,

1956 ★ ಸುರತ್ಕಲ್ (ದ.ಕ.) ★ ಬೆಲೆ: ಆಣೆ ೧.

ಒಂದಾಣೆ ಮಾಲೆ -:- ಮಂಗಳೂರು

# ಪುರಂದರ ದಾಸರು

## (ಏಕಾಂಕ ನಾಟಕ)

★

**ಪಾತ್ರ ಪರಿಚಯ:**

೧. ಶ್ರೀನಿವಾಸ ನಾಯಕ — ಕಥಾ ನಾಯಕ.
೨. ಮುಕುಂದ ಪೆದ್ದಿ — ಗಿರಾಕಿ.
೩. ಬ್ರಾಹ್ಮಣ
೪. ಹನುಮ — ಸೇವಕ.
೫. ವ್ಯಾಸರಾಯ ಸ್ವಾಮಿಗಳು
೬. ಸರಸ್ವತಿ — ನಾಯಕನ ಹೆಂಡತಿ.

### ದೃಶ್ಯ ೧.

**ಸ್ಥಾನ — ಅಂಗಡಿ.**

[ಶ್ರೀನಿವಾಸ ನಾಯಕರ ಚಿನ್ನದಂಗಡಿ. ಎದುರುಗಡೆ ಲಕ್ಷ್ಮಿಯ ಚಿತ್ರವಿದೆ. ಅಕ್ಕಪಕ್ಕದ ಬೀರಂಗಳಲ್ಲಿದ್ದ ಬೆಳ್ಳಿಯ ಹರಿವಾಣಗಳಲ್ಲಿ ಚಿನ್ನದ ವಿವಿಧ ಆಭರಣಗಳು ಕಂಗೊಳಿಸುತ್ತಿವೆ. ಅಲ್ಲಲ್ಲಿ ಚಿನ್ನದ ಸರಗಳು ತೂಗಾಡಿಸಲ್ಪಟ್ಟಿವೆ. ಬಳಿಯಲ್ಲಿ ತಕ್ಕಡಿ, ಪಡಿಕಲ್ಲುಗಳು ಓರಣವಾಗಿಡಲ್ಪಟ್ಟಿವೆ. ನಾಯಕರು ರೂಪಾಯಿಗಳನ್ನು ಲೆಕ್ಕಮಾಡುತ್ತ ಕುಳಿತಿದ್ದಾರೆ. ಮುಕುಂದ ಪೆದ್ದಿಯ ಪ್ರವೇಶ]

ಮುಕುಂದ ಪೆದ್ದಿ: ನಮಸ್ಕಾರುಲು ಸಾಹುಕಾರ್ರಿಂಗೆ.

ನಾಯಕ: ನಮಸ್ಕಾರ, ನಮಸ್ಕಾರ! ಬನ್ನಿ, ಕುಳಿತುಕೊಳ್ಳಿ. ಏನು ಬಂದಿರಿ? ಏನು ಬೇಕು?

ಪೆದ್ದಿ: ಕೊಂಚ ವ್ಯಾಪಾರಮಾಡಲಿಕ್ಕೆ ಉಂಟು.

ನಾಯಕ: ನೋಡಿ! ತೆಗೆದುಕೊಳ್ಳಿ! (ಒಂದೆರಡು ಸರ ತೋರಿಸುತ್ತ) ಹೊಸದಾಗಿ ಈಗತಾನೆ ಕೆಲವು ಮಾಲುಗಳನ್ನು ತಯಾರಿಸಿ ಇಟ್ಟಿದ್ದೇನೆ. ನೋಡಿ, ಇಲ್ಲಿ ಮುತ್ತುಗಳ ಮಾಲಿಕೆಗಳಿವೆ. ವಜ್ರದ ಮುಂದಲೆಬೊಟ್ಟಿದೆ; ಮಾಣಿಕ್ಯದ ಗಿಳಿಯೋಲೆಯಿದೆ. ಸೊಂಟದ ಡಾಬು ಇದೆ. ಕೈಯ ಕಂಕಣ

ಇದೆ. ಯಾವುದು ಬೇಕು ಹೇಳಿ? ಏಳೆಳೆಯ ಚಕ್ರಸರ ಬೇಕೆ? ಅಥವಾ ಮೂರೆಳೆಯ ಗೆಜ್ಜೆಟಿಕ್ಕಿ ಬೇಕೆ? ಹೇಳಿ!

ಪೆದ್ದಿ: ನಾನು ಬಂಗಾರ ತೆಗೆದುಕೊಳ್ಳಲು ಬಂದುದಲ್ಲ. ನನ್ನ ಒಂದು ನಗವಿದೆ. ಅದು ನಿಮ್ಮಲ್ಲಿ ಗಿರಾಕಿಯಾದೀತೋ ಎಂದು ಬಂದೆ.

ನಾ: ಹಾಗೋ? ತೆಗೆಯಿರಲ್ಲ! ಎಲ್ಲಿದೆ?

ಪೆದ್ದಿ: (ತೆಗೆದು ತೋರಿಸುತ್ತ) ಇವೆರಡು ಗಟ್ಟಿ ಬಳೆಗಳು! ಗಟ್ಟಿ ಎಂದರೆ ಗಟ್ಟಿಯೇ. ಒಳಗೆ ಗೋಳಿ ಅಲ್ಲ; ತಿಳಿತೋ ಇಲ್ವೊ?

ನಾ: ಬಹಳ ಹಳೆಯದೆಂದು ಕಾಣುತ್ತದೆ.

ಪೆ: ಏನು ಚೆಪ್ಸಾರು ಸಾವಿು ನೀವುು? ಎನ್ನ ಚೆಪ್ಸಾರು? ಅದನ್ನು ಮಾಡಿಸಿ ಮುಂದಿನ ದೀಪಾವಳಿಗೆ ಮೂರು ವರ್ಷ ಆಗುತ್ತಾನಷ್ಟೆ! ತಿಳೀತೋ ಇಲ್ವೊ? ಶುದ್ಧ ಪುತ್ಥಳಿ ಚಿನ್ನತ್ತಲೇ ಮಾಡಿಸಿದುದು ಗಟ್ಟಿಬಳೆ; ತಿಳೀತೋ ಇಲ್ವೊ?

ನಾ: (ಒರೆಕಲ್ಲಿಗೆ ತಿಕ್ಕುತ್ತ) ನೋಡಿ........ಹಾ,....... ತಮ್ಮ ಹೆಸರು?

ಪೆ: ಮುಕುಂದ ಪೆದ್ದಿ.

ನಾ: ನೋಡಿ ಪೆದ್ದಿಗಳೆ! ನೀವು ಶುದ್ಧ ಪುತ್ಥಳಿ ಚಿನ್ನದಿಂದಲೇ ಮಾಡಿಸಿರಬಹುದು. ಆದರೆ, ಈಗಿನ ಕಾಲದಲ್ಲಿ ಯಾರನ್ನೂ ನಂಬುವ ಹಾಗಿಲ್ಲ. ತಂದೆಯು ಮಗನನ್ನು, ಗಂಡನು ಹೆಂಡತಿಯನ್ನು ನಂಬುವಂತಿಲ್ಲ. ಈ ಕೈಗೆ ಆ ಕೈಯನ್ನು ನಂಬಲು ಸಾಧ್ಯವಿಲ್ಲ. ಹೌದೋ ಅಲ್ಲವೋ ಹೇಳಿ!

ಪೆ: ಶುದ್ಧ ಚಿನ್ನ ಕೊಡ್ತದೆ. ನಗ ಮ್ಹಾಡು ಅಂತ ಹೇಳ್ತದೆ. ಅವ ಏನುಮಾಡ್ತಾನೋ ಏನೊ? ತಿಳೀತೋ ಇಲ್ವೊ.

ನಾ: (ಚೆನ್ನಾಗಿ ತಿಕ್ಕಿ) ಸ್ವಾಮಿ, ಪೆದ್ದಿಗಳೆ! ಈಗ ತಿಳಿಯಿತು. ಇದು ಹಿತ್ತಾಳೆಗಿಂತ ಸ್ವಲ್ಪ ಹೆಚ್ಚು, ಬಂಗಾರಕ್ಕಿಂತ ಸ್ವಲ್ಪ ಕಡಿಮೆ. ಆದುದರಿಂದ ನಮ್ಮಲ್ಲಿ ಗಿರಾಕಿ ಆಗುವುದು ಬಹಳ ಕಷ್ಟ. (ಕೆಳಗಿಡುವರು.)

ಪೆ: ಹೇಂಗಾದರೂ ಮಾಡಿ ಅಷ್ಟು ಹಣ ಕೊಡಿ ಸಾಹುಕಾರ್ರೇ. ಬಹಳ ಕಷ್ಟದಲ್ಲಿ ಉಂಟು. ಏನೋ ಕೆಟ್ಟ ಕಾಲಂ ಅಂತ ಇದನ್ನು ಮಾರುವುದಕ್ಕೆ ತಂದಿದ್ದೇನೆ. ಇಲ್ಲದಿದ್ದರೆ ಇಂತಹ ಮಾಲನ್ನು ಎಂದಿಗೂ ಮಾರಲು ತರಲು ಉಂಟೆ?

ನಾ: ಛೆ! ಅಲ್ಲವೆ ಮತ್ತೆ? (ಪುನಃ ಹಿಡಿದು) ಇದನ್ನು ತಾವೇ ಮಾಡಿಸಿದ್ದೋ ಅಥವಾ—

ಪೆ: ನಾನೇ........ಅಂದ್ರೆ.......ನಾನೇ. ಅದರ ಬಂಗಾರವೆಲ್ಲ ತವರು ಮನೆಯದ್ದು. ತಿಳಿತೋ ಇಲ್ವೊ.

ನಾ: ಅದು ಸರಿ! ನಾವಾದರೂ ಇಂತಹ ಮಾಲನ್ನು ತೆಗೆದುಕೊಂಡು ಬೇರೆಯವರಿಗೆ ಮಾರಬೇಕಲ್ಲ ಸ್ವಾಮಿ! ಹೇಗಾದರೂ ಕಷ್ಟಪಟ್ಟು ಎಂಟು ವರಹ ಕೊಡಬಹುದು. ಅದೂ ಸಹ ನಿಮಗಾದ್ದರಿಂದ. ಬೇರೆಯವರಿಗಾದ್ರೆ ಮತ್ತೂ ಕಡಿಮೆ.

ಪೆ: ಹದಿನೈದು ವರಹ ಆದರೂ ಕೊಡಿ ಸಾಹುಕಾರ್ರೆ!

ನಾ: ಹದಿನೈದು ವರಹ! ಬೆಟ್ಟಿಚಿನ್ನಕ್ಕೆ? ಕುರುಡ ಕೂಡ ಅಷ್ಟು ಕೊಡಲಾರ! [ಬಳೆಯನ್ನು ಅವನ ಮುಂದಿಡುತ್ತ] ಕೊನೆಗೆ ಹತ್ತು ವರಹಕ್ಕಿಂತ ಒಂದು ದಮಡಿ ಹೆಚ್ಚು ಕೊಡಲು ಸಾಧ್ಯವಿಲ್ಲ. ಚಿನ್ನಕ್ಕೆ ಈಗ ಗಿರಾಕಿಯೇ ಇಲ್ಲ, ಪೆದ್ದಿಗಳೆ! ಇದ್ದವರೆಲ್ಲ ನಿಮ್ಮ ಹಾಗೆ ಮಾರಲು ತರುತ್ತಾರೆಯೇ ವಿನಾ ಕೊಳ್ಳುವುದಕ್ಕೆ ಬರುವುದೇ ಇಲ್ಲ.

ಪೆ: ಹನ್ನೊಂದಾದರೂ ಮಾಡಿ ಸಾಹುಕಾರ್ರೆ! ಕಷ್ಟದಲ್ಲಿದ್ದೇನೆ.

ನಾ: ಸಾಧ್ಯವಿದ್ದರೆ ಕೊಡುವುದಿಲ್ಲವೆ ಪೆದ್ದಿಗಳೆ?

ಪೆ: ಆಯಿತಪ್ಪ! ಅಷ್ಟಾದರೂ ಕೊಡಿ, ಏನು ಮಾಡೋದು. [ಹಣ ಬಡಿದುಕೊಳ್ಳುವನು] [ನಾಯಕರು ಎರಡು ಮೂರು ಸಲ ಲೆಕ್ಕ ಮಾಡಿ ಕೊಡಲು, ಪೆದ್ದಿಯು ಅದನ್ನು ತೆಗೆದುಕೊಂಡು ಹೋಗುವನು.]

ನಾ: [ಬಳೆಯನ್ನು ವಸ್ತ್ರದಿಂದ ಒರಸುತ್ತ] ಶುದ್ಧ ಪೆದ್ದಂಭಟ್ಟ! ಎಲ್ಲಿಂದಲೋ ಹಾರಿಸಿರಬೇಕು. ಇಲ್ಲದಿದ್ದರೆ ಹುಟ್ಟುಕುರುಡನಾದರೂ ಇಪ್ಪತ್ತು ವರಹ ಕೊಟ್ಟಾನು. ಯಾವ ಊರಿದ್ದೋ ಬೆಪ್ಪುತಕ್ಕಡಿ ಇರಬೇಕು.

[ಬ್ರಾಹ್ಮಣನ ಪ್ರವೇಶ]

ಬ್ರಾಹ್ಮಣ: ಸ್ವಾಮಿ..............!

ನಾ: [ಹುಬ್ಬುಗಂಟಿಕ್ಕಿ] ಏನು? ಮೇಲೆಲ್ಲಿಗೆ ಬರುತ್ತಿ? ನಿಲ್ಲಲ್ಲಿ!

ಬ್ರಾ: ನಾನು........ಬಡ ಬ್ರಾಹ್ಮಣ ಸ್ವಾಮಿ!

ನಾ: ಬಡ ಬ್ರಾಹ್ಮಣನಿಗೆ ಇಲ್ಲಿ ಸ್ಥಳವಿಲ್ಲ; ಅದೆಲ್ಲಾ ಛತ್ರದಲ್ಲಿ; ನಡೆ.

ಬ್ರಾ: ಬಡವನಾಗಿ ಹುಟ್ಟಿದ್ದೇನೆ ಸ್ವಾಮಿ.

ಸಾ: ಬಡವನಾಗಿ ಹುಟ್ಟುವುದಕ್ಕೆ ಯಾರು ಹೇಳಿದರು?

ಬ್ರಾ: ದೇವರು ಹುಟ್ಟಿಸಿದನು ಮಹಾಸ್ವಾಮಿ!

ಸಾ: ದೇವರು ಹುಟ್ಟಿಸಿದರೆ ದೇವರ ಬಳಿಗೇ ಹೋಗಿ ಕೇಳು; ಇಲ್ಲೇಕೆ ಬಂದೆ?

ಬ್ರಾ: ಏನೋ ಸ್ವಾಮಿ, ಬದುಕಿಕೊಂಡಿದ್ದೇನೆ.

ಸಾ: ಯಾಕೆ ಬದುಕಬೇಕಿತ್ತಯ್ಯಾ ನೀನು?

ಬ್ರಾ: ಇಷ್ಟರ ವರೆಗೆ ಬದುಕಿದೆ; ಈಗ ವೃದ್ಧಾಪ್ಯ, ಕೈಕಾಲುಗಳಲ್ಲಿ ಶಕ್ತಿಯೇ ಇಲ್ಲ.

ಸಾ: ವಯಸ್ಸು ಮಾಗಿಯುವಾಗ ಎಲ್ಲರೂ ವೃದ್ಧರೇ.

ಬ್ರಾ: ಸ್ವಾಮಿ! ಜೀವನ ನಡೆಯಿಸುವುದೇ ಕಷ್ಟವಾಗಿದೆ.

ಸಾ: ಎಲ್ಲರ ಕಷ್ಟ ದುಃಖಗಳನ್ನು ವಿಚಾರಿಸಲು ನಾನಿಲ್ಲಿ ಕುಳಿತಿಲ್ಲ.

ಬ್ರಾ: ನೀವು ಅದಕ್ಕಾಗಿ ಕುಳಿತಿರದಿದ್ದರೂ ನಮ್ಮಂತವರ ಕಷ್ಟಗಳನ್ನು ನಿಮ್ಮಂತವರಲ್ಲಿ ತಿಳಿಸದೆ ಮತ್ತಾರಲ್ಲಿ ತಿಳಿಸಲಿ?

ಸಾ: ನೀನೆಂತಹ ಒರಟು ಬ್ರಾಹ್ಮಣನಯ್ಯ! ಇಲ್ಲಿಂದ ನಡೆ ಎಂದರೂ ನಾಚಿಕೆಯಿಲ್ಲದೆ ಪುನಃ ನಿಂತಿದ್ದಿಯಲ್ಲ!

ಬ್ರಾ: ಏನು ಮಾಡಲಿ ಸ್ವಾಮಿ; ನಾಚಿಕೆ ಕೆಡುವ ಪರಿಸ್ಥಿತಿ ಬಂದೊದಗಿದೆ; ಇಲ್ಲವಾದರೆ ಬರುತಿದ್ದಿಲ್ಲ.

ಸಾ: ಎಂತಹುದೋ ನಿನ್ನ ಪರಿಸ್ಥಿತಿ?

ಬ್ರಾ: ಬ್ರಹ್ಮೋಪದೇಶಕ್ಕಿಂತಲೂ ಮಿಗಿಲಾದ ಪುಣ್ಯಕಾರ್ಯವಿಲ್ಲ. "ಇಂತಹ ಸತ್ಕಾರ್ಯಕ್ಕೆ ಸಹಾಯ ಮಾಡಿ ದೇವತಾನುಗ್ರಹಕ್ಕೆ ಪಾತ್ರರಾಗಿರಿ" ಎಂದು ತಮ್ಮಲ್ಲಿಗೆ ಬಂದಿದ್ದೇನೆ.

ಸಾ: ಪುಣ್ಯವೋ ಪಾಪವೋ; ಯಾರಿಗೆ ಬೇಕಾಗಿದೆ? ಇರಲಿ, ಯಾರಿಗೆ ಉಪನಯನ?

ಬ್ರಾ: ನನ್ನ ಒಬ್ಬನೇ ಒಬ್ಬ ಮಗನಿಗೆ

ಸಾ: ಇವತ್ತು ಉಪನಯನ; ನಾಳೆ ಮದುವೆ; ನಾಡಿದ್ದು ಶ್ರಾದ್ಧ, ಆ ಮೇಲೆ ಕಾಶೀಯಾತ್ರೆ, ನಿತ್ಯವೂ ನಿಮ್ಮಂತವರು ನೂರಾರು ಜನ ಒಂದೊಂದು ನೆಪದಿಂದ ಬರುತ್ತಲೇ ಇರುತ್ತಾರೆ. ಊರಲ್ಲಿ ನಡೆಯುವ

ಕಾರ್ಯಗಳಿಗೆಲ್ಲ ಸಹಾಯ ಮಾಡುತ್ತೇನೆಂದು ನಾನು ಹರಕೆ ಹೊತ್ತಿಲ್ಲ ವಯ್ಯಾ.

ಬ್ರಾ: ಆದರೂ ತಮ್ಮಂತವರು ಸಹಾಯ ಮಾಡಿ ಬಡವರನ್ನು ಉದ್ಧರಿಸದಿದ್ದರೆ ಮತ್ತಾರು ಸ್ವಾಮೀ?

ನಾ: ಯಾವಾಗ ಉಪನಯನ?

ಬ್ರಾ: ಇನ್ನೂ ಮುಹೂರ್ತ ನೋಡಿಲ್ಲ; ನಿಮ್ಮಂತವರ ಸಹಾಯವಿದೆ ಎಂದಾದ ಮೇಲೆ............

ನಾ: ಏನಯ್ಯಾ! ಮಗು ಹುಟ್ಟುವುದಕ್ಕಿಂತ ಮೊದಲೇ ಕುಲಾವಿ ಹೊಲಿದಿಡುವೆಯಲ್ಲ! ದಿನ, ಮುಹೂರ್ತ, ಎಲ್ಲಾ ನಿಶ್ಚಯವಾಗಲಿ; ಆ ಮೇಲೆ ನೋಡೋಣವಂತೆ; ಈಗ ಸಮಯವಿಲ್ಲ. ಅಂಗಡಿ ಬಾಗಿಲು ಮುಚ್ಚುವ ಸಮಯವಾಯಿತು. ನಡೆ ಈಗ ಇಲ್ಲಿಂದ. ಬೇಡುವವರಿಗೇನು, ಎಲ್ಲಾ ಸಮಯವೂ ಒಂದೇ; ಹೊತ್ತಿಲ್ಲ ಗೊತ್ತಿಲ್ಲ. (ಪೆಟ್ಟಿಗೆಗೆ ಬೀಗ ಹಾಕುವರು)

(ಪರದೆ ಬೀಳುವುದು.)

## ದೃಶ್ಯ ೨.

[ಶ್ರೀನಿವಾಸ ನಾಯಕರ ಮನೆ. ಅಥ್ಯತನಕೊಪ್ಪುವ ವಸ್ತುಗಳಿಂದ ತುಂಬಿದೆ ಮನೆ. ನಾಯಕರು ಅಂಗಿ ಹಾಕಿ, ಮುಂಡಾಸಿಟ್ಟು ಹೊರಡುವ ಆತುರದಲ್ಲಿ ಬೀಗದ ಕೈಗಳನ್ನು ಹುಡುಕುತಿದ್ದಾರೆ.]

ನಾ: ಅತ್ತ ಅಂಗಡಿಯಲ್ಲಿ ಬೇಡುವವರ ಕಾಟ; ಇತ್ತ ಮನೆಯಲ್ಲಿ ಸಂಸಾರದ ಪಿಕಲಾಟ; ಮಧ್ಯೆ ನನಗೆ ಪೇಚಾಟ! ಹೊರಗಿನಿಂದ ನಾವು,— ಗಂಡಸರು ಎಷ್ಟು ಸಂಪಾದನೆಮಾಡಿ ತಂದುಹಾಕಿದರೂ ಈ ಮನೆಯಲ್ಲಿ ಮಾರುಕ್ಷಣದಲ್ಲೇ ಮಂಗಮಾಯ! ಮನೆಯಲ್ಲಿ ಪಟ್ಟಾಗಿ ಕುಳಿತುಕೊಂಡು ಅದಿಲ್ಲ, ಇದಿಲ್ಲ, ಅದು ಸಾಲದು, ಇದು ಸಾಲದೆಂದು ಹೇಳುವದಕ್ಕೊಂದು ಗೊತ್ತು. ಒಂದು ದಮಡಿ ಸಂಪಾದಿಸಬೇಕಾದರೂ ಎಷ್ಟು ಬೆವರಿಳಿಸಿ ದುಡಿಯಬೇಕೂಂತ ಮನೆಯಲ್ಲಿ ಕುಳಿತ ಮಂಗಳೆಯರಿಗೇನು ಗೊತ್ತು? (ಅತ್ತಿತ್ತ ಪುನಃ ಹುಡುಕುವರು.)

ಸರಸ್ವತಿ: (ಪ್ರವೇಶಿಸಿ, ವಿನಯದಿಂದಲೇ) ಹೌದು! ಈಗ ನಿಮಗೆ ಹೊತ್ತಾಗುತ್ತದೆ; ಮತ್ತೆ ರಾತ್ರೆ ಬಂದಮೇಲೆ ಊಟಕ್ಕೆ ಹೊತ್ತಾಯಿತೆಂದರೆ—

ಹೀಗೆ ಮಧ್ಯರಾತ್ರಿಯ ವರೆಗೆ ಎಣ್ಣೆ ಖರ್ಚುಮಾಡುತ್ತ ಇದ್ದರೆ ಹೇಗೆ—ಎಂದು ಬಯ್ಯುವವರೂ ನೀವೇ.

ನಾ: ಅದೆಲ್ಲ ಇರಲಿ, ಪುರಾಣ! ಈಗ ಯಾವ ಯಾವ ಸಾಮಾನು ಬೇಕು ಹೇಳು.

ಸ: ಒಂದುವರೆ ಸೇರು ಅಕ್ಕಿ. ಒಂದು ತೆಂಗಿನ ಕಾಯಿ, ಐದು ಮೆಣಸು, ಎರಡು ಚಮಚ ಎಣ್ಣೆ, ಇಪ್ಪತ್ತು ಸಾಸಿವೆಕಾಳು.

ನಾ: ಏನು? ಒಂದು ಒಗ್ಗರಣೆಗೆ ಇಪ್ಪತ್ತು ಸಾಸಿವೆಕಾಳು? ಅಬ್ಬ! ಇದು ಮನೆ ಮಾರಿ ತಿನ್ನುವ ಬುದ್ಧಿವಂತಿಕೆ! ಹತ್ತು ಸಾಸಿವೆ, ಎರಡು ಮೆಣಸು ಸಾಕು. ಹೆಚ್ಚು ಖರ್ಚು ಮಾಡುವುದಕ್ಕೆ ನಿನ್ನ ಅಪ್ಪನ ಮನೆಯಿಂದ ತಂದುದೇನಲ್ಲ. ನಾನೇ ಕಷ್ಟಪಟ್ಟು ಸಂಪಾದಿಸಿದುದು. ಅಷ್ಟೇ ಸಾಕು. ಇದ್ದುದರಲ್ಲೇ ಅಚ್ಚುಕಟ್ಟಾಗಿ ಶುಚಿಯಾಗಿ ಅಡಿಗೆಮಾಡು. (ತೆರೆಯಲ್ಲಿ ಮಗು ಕೂಗುವುದು) ಯಾರದು ಕೂಗುವುದು? ಹಾಂ; ಮಗು ಕೂಗಿದರೆ ಮೆಲ್ಲನೆ ಸಮಾಧಾನಮಾಡು. ಬೆಲ್ಲಗಿಲ್ಲ ಕೊಟ್ಟೆಯೆಂದರೆ ಜಾಗ್ರತೆ! ಮೊನ್ನೆ ದೀಪಾವಳಿಗೆ ತಂದುದಲ್ಲವೇನೆ ಕಾಲು ಮಣ ಬೆಲ್ಲ? ಮುಂದಿನ ದೀವಳಿಗೆ ವರೆಗೆ ಬರಬೇಕು. ಮಧ್ಯದಲ್ಲಿ ಖರ್ಚಾಯಿತು ಎಂದರೆ ಎಚ್ಚರ! (ಅವಳ ಮೈಮೇಲಿದ್ದ ಅಭರಣಗಳನ್ನೆಲ್ಲ ನೋಡಿ) ಹಾದೇನೆ! ಇಲ್ಲಿ ಬಾ, ಇವೊತ್ತೇನು ಪೆಟ್ಟಿಗೆಯಲ್ಲಿದ್ದ ಅಭರಣಗಳೆಲ್ಲ ಮೈಮೇಲೆ ಬಂದಿವೆ?

ಸ: ಮತ್ತೇನಿಲ್ಲ; ಮಂಗಳ ಲಕ್ಷ್ಮೀವ್ರತ! ನೆರೆಮನೆಗೆ ಹೋಗಿ ಕುಂಕುಮವಿಟ್ಟು ಬರಬೇಕೆಂದು ಒಡವೆಗಳನ್ನೆಲ್ಲ ಹಾಕಿಕೊಂಡೆ ಅಷ್ಟೆ.

ನಾ: ಸರಿ! ಈ ಹೊತ್ತು ಮಂಗಳ ಲಕ್ಷ್ಮೀವ್ರತ! ನಾಳೆ ಶುಕ್ರವಾರ ವ್ರತ, ನಾಡಿದ್ದು ಗೋಕುಲಾಷ್ಟಮಿ, ಆಚೆ ನಾಡಿದ್ದು ಶಿವರಾತ್ರಿ, ಮತ್ತೊಂದು ದಿನ ನವರಾತ್ರಿ,—ಹೀಗೆಲ್ಲಾ ಆಭರಣಗಳನ್ನು ಹಾಕಿಕೊಂಡರೆ ಅವು ಸವೆದೇ ಹೋಗುವವಲ್ಲವೇನೆ? ಒಂದು ವೇಳೆ ನೀನು ಅವನ್ನು ಹಾಕಿಕೊಂಡರೂ ನೋಡುವವರು ಯಾರು? ನನಗೇನಾದರೂ ಬಡ್ಡಿ ಬರುತ್ತದೆಯೆ? ಹಬ್ಬದ ದಿನ ಎಂದಾದರೆ ಅದನ್ನೊಮ್ಮೆ ನೋಡಿಬಿಟ್ಟರೆ ಸಾಲದೆ? ಸುಮ್ಮ ಸುಮ್ಮನೆ ಅವುಗಳನ್ನೆಲ್ಲ ಹಾಕಿಕೊಂಡು ಹಾಳಾದರೆ?

ಸರಸು! ನಿನಗಿಷ್ಟು ಪ್ರಾಯವಾಯಿತು! ಆದರೂ ಜಾಗ್ರತೆ ಸಾಲದು. ಆಗಲಿ, ಹೋಗಿ ಬರುವೆ. ಹನುಮ! ಏಯ್ ಹನುಮ!

ಹನುಮ: ಬಂದೆ ಬುದ್ಧಿ, ಬಂದೆ ಬುದ್ಧಿ (ಓಡಿ ಬರುವನು).

ನಾ: ನನ್ನ ಕೈ ಪೆಟ್ಟಿಗೆಯನ್ನು ತೆಗೆದು ಕೊ.

ಹ: ಅಪ್ಪಣೆ ಬುದ್ಧಿ (ಹನುಮನು ತೆಗೆದುಕೊಳ್ಳುವನು).

ನಾ: (ಹೋಗುತ್ತ) ಮಕ್ಕಳಿಗೆಲ್ಲಾ ಬೇಗನೆ, ಕತ್ತಲಾಗುವುದಕ್ಕಿಂತ ಮೊದಲೇ ಅನ್ನ ಹಾಕಿ ಬಿಡು. ನಾನು ಬರುವಾಗ ಕತ್ತಲಾದರೂ ದೊಡ್ಡ ದೀಪಹಚ್ಚಿ ಕುಳ್ಳಿರುವುದು ಬೇಡ. ನಾನು ಬಂದ ಮೇಲೆಯೇ ಅದನ್ನು ಹಚ್ಚಿದರೂ ಸಾಕು.

ಸ: ಆಯಿತು. ನನಗಷ್ಟು ತಿಳಿದಿಲ್ಲವೆ? ನೀವು ಹೋಗಿ ಬನ್ನಿ. (ಹೋಗುವರು). (ಫರದೆ ಬೀಳುವುದು.)

## ದೃಶ್ಯ ೩

[ನಾಯಕರ ಅಂಗಡಿ; ನಾಯಕರು ಬೇರೆ ಬೇರೆ ಬೀಗದ ಕೈಗಳನ್ನು ಹಾಕಿ ಬೀಗ ತೆಗೆಯುತ್ತಿರುವರು. ಬ್ರಾಹ್ಮಣನ ಪ್ರವೇಶ.]

ನಾಯಕರು: (ನೋಡಿ) ಸರಿಯಪ್ಪ! ಅಂಗಡಿ ಬಾಗಿಲು ತೆಗೆಯುವುದಕ್ಕೂ ಪುರುಸೊತ್ತಿಲ್ಲ, ಬಂದಾಯಿತು! ವ್ಯಾಸಾರದಲ್ಲಿ 'ಬೋಣಿ' ಆಗದಿದ್ದರೂ ಬೇಡುವವರು ಧಾರಾಳ! ಈ ಕಾಟ ಎಂದಿಗೆ ಮುಗಿಯುವುದೋ ಕಾಣೆ.

ಬ್ರಾ: ನಮಸ್ಕಾರ ಸ್ವಾಮಿ!

ನಾ: ಆಯ್ತು ಬಿಡು! ದಿನ ಬೆಳಗಾದರೆ ನಿನ್ನ ಪೀಡೆ ತಪ್ಪಲಿಕ್ಕಿಲ್ಲ. ಒಂದು ಚಿಕ್ಕಾಸಿನ ವ್ಯಾಪಾರ ಆಗದಿದ್ದರೂ ಚಿಂತೆಯಿಲ್ಲ. ಸಾಲಕೊಟ್ಟವನಾದರೂ ಈ ರೀತಿ ಕಾಡಿಸಲಾರ!

ಬ್ರಾ: ಪ್ರತಿದಿನ ಬರುತಿದ್ದೇನೆ ಸ್ವಾಮಿ, ತಮ್ಮ ಸನಿಧ್ಯಿಗೆ!

ನಾ: ಯಾರು ಹೇಳಿದರು ನಿನಗೆ, ಪ್ರತಿದಿನ ಬೆಳಗ್ಗೆ ಎದ್ದ ಕೂಡಲೆ ತಪ್ಪದೆ ಇಲ್ಲಿಗೆ ಹಾಜರಾಗಬೇಕು ಎಂದು?

ಬ್ರಾ: ಆರು ತಿಂಗಳಿಂದಲೂ ಒಂದೇಸವನೆ ಪ್ರತಿನಿತ್ಯ ಬರುತಿದ್ದೇನೆ ಸ್ವಾಮಿ!

ನಾ: ಯಾರಿಗೋಸ್ಕರ? ನಾನೇನಾದರೂ ನಿನ್ನನ್ನು ಅಕ್ಷತೆಕಾಳು ಕೊಟ್ಟು ಬಾ ಎಂದು ಆಹ್ವಾನಿಸಲಿಲ್ಲ.

ಬ್ರಾ: ತಾವೇನಾದರೂ ಸಹಾಯಮಾಡಬಹುದು ಎಂದು ಬರುತಿದ್ದೇನೆ.

ನಾ: ನೀನು ಮನದಲ್ಲೇ ಮಂಡಿಗೆ ಮಾಡಿಕೊಂಡಿದ್ದರೆ ಅದಕ್ಕಾರು ಹೊಣೆ?

ಬ್ರಾ: ತಾವು 'ನಾಳೆ ಬಾ, ಏನಾದರೂ ಸಹಾಯಮಾಡುವ' ಎಂದಿದ್ದೀರಿ.

ನಾ: ಇನ್ನೂ 'ನಾಳೆ' ಮುಗಿಯಲಿಲ್ಲವಲ್ಲ ಕೊನೆಯ ನಾಳೆದಿನ ಬಾ.

ಬ್ರಾ: ಬೆಳಗ್ಗೆ ಬಂದರೆ 'ಬೋಣಿ'ಯಾಗಲಿಲ್ಲ, ಮಧ್ಯಾಹ್ನ ಬಂದರೆ ವ್ಯಾಪಾರದ ಗದ್ದಲ, ಸಂಜೆ ಬಂದರೆ ಬಾಗಿಲು ಹಾಕುವ ಹೊತ್ತು; ಹಾಗಾದರೆ ಇನ್ನಾವಾಗ ಬರಲಿ ಸ್ವಾಮಿ?

ನಾ: ನಿನ್ನ ಶನಿಕಾಟ ತೊಲಗುವುದು ಯಾವಾಗಲೋ ಆಗ ಬಾ.

ಬ್ರಾ: ಏನಾದರೂ ಯತ್ಕಿಂಚಿತ್ ಸಹಾಯ ಮಾಡಿಬಿಡಿ, ಆರು ತಿಂಗಳಿಂದ ದುಡಿಯುತಿದ್ದೇನೆ.

ನಾ: ನಿನ್ನಂಥವರು ಯಾಕೆ ಹುಟ್ಟಬೇಕು ಹೇಳು, ಪರಪೀಡಾ ರಕ್ಕಸರಾಗಿ! ನಿನಗೇನು ಬೇಕಪ್ಪಾ ಈಗ?

ಬ್ರಾ: ಖರ್ಚಿಗೆಂದು ಅಲ್ಪಸ್ವಲ್ಪ ಹಣ ಸಹಾಯಮಾಡುತಿದ್ದರೆ ನಿಮ್ಮ ಹೆಸರಿನಿಂದ ಉಪನಯನ ಮಾಡುತಿದ್ದೆ.

ನಾ: ಹಣ, ಹಣ, ಹಣ! ಎಲ್ಲರೂ ಕೇಳುವುದು ಅದನ್ನೇ. ರಾಜನಿಗೂ ಬೇಕು ಹಣ. ಪ್ರಜೆಗಳಿಗೂ ಬೇಕು ಹಣ. ತಿರುಪೆಯವರಿಗೂ ಬೇಕು ಹಣ. ಆ ಹಣಕ್ಕೋಸ್ಕರ ಈ ಹೆಣ ಎಷ್ಟು ದುಡಿಯಬೇಕು ಗೊತ್ತುಂಟೇನು? (ಒಂದು ಚಿಕ್ಕ ನಾಣ್ಯವನ್ನು ಹುಡುಕಿ ಅತ್ತ ಎಸೆದು) ಇಕೊ, ತೆಗೆದುಕೊ, ಒಮ್ಮೆ ಗ್ರಹಚಾರ ತಪ್ಪಲಿ.

ಬ್ರಾ: (ನೋಡಿ) ಅಯ್ಯೋ, ಈ ಶವಕಲು ನಾಣ್ಯ ನನಗೆ ಯಾಕೆ ಸ್ವಾಮಿ!

ನಾ: ಬೇಕಾದರೆ ಕೊಂಡುಹೋಗು, ಇಲ್ಲವಾದರೆ ಇಟ್ಟು ಹೋಗು!

ಬ್ರಾ: ಈ ಆರು ತಿಂಗಳು ದುಡಿದುದಕ್ಕೆ ಇದೇನೆ ಸ್ವಾಮಿ ನನಗೆ! ನಡೆಯದ ಒಂದು ಕಾಸು!

ನಾ: ಸಾಕು ಸಾಕು; ಬಾಯಿಮುಚ್ಚಿಕೊಂಡು ಕೊಟ್ಟುದನ್ನು ತೆಗೆದುಕೊಂಡು ಹೋಗು.

ಬ್ರಾ: ಇದನ್ನು ನೀವೇ ಇಟ್ಟುಕೊಳ್ಳಿ ಸ್ವಾಮಿ (ಎಸೆಯುವನು).

ನಾ: ಬೇಡವಾದರೆ ನಡೆ ಇಲ್ಲಿಂದ. (ಅವನು ನಿಂತಿರುವುದನ್ನು ನೋಡಿ) ಹೂಂ, ನಡೆ ಇಲ್ಲಿಂದ! ಇನ್ನು ಈ ಕಡೆಗೆ ಮುಖ ತಿರುಗಿಸಿದರೆ ಜಾಗ್ರತೆ! ಅಲ್ಲಲ್ಲ, ಈ ತಿರುಪೆಯವನಿಗೂ ಅದೆಷ್ಟು ಧಿಮಾಕು! ಕೊಟ್ಟದ್ದು ಸಾಲದಂತೆ, ಅದು ಸವಕಲಂತೆ. ಅವನು ಕೇಳಿದ್ದನ್ನು ಕೊಡಲಿಕ್ಕೆ ಅವನಪ್ಪ ಕೂಡಿಹಾಕಿದ್ದಾನೋ ಇಲ್ಲಿ? ಈ ತಿರುಕರ ಸಹವಾಸವೇ ಕಷ್ಟ. ಕೊಡಲಿಲ್ಲ; ಬೆನ್ನು ಬಿಡಲಿಲ್ಲ; ಕೊಟ್ಟತೋ ಅದು ಸಾಲದು, ಸವಕಲು; ಎಂಬ ದೂಷಣೆ. (ನಾಣ್ಯವನ್ನು ಒಳಗಿಡುತ್ತ) ಭಾಗ್ಯವನ್ನು ಪಡೆದು ಹುಟ್ಟಿ ಬಂದಿಲ್ಲ; ಭಾಗ್ಯವಂತರನ್ನು ನೋಡಿ ಅಸೂಯೆ ತಪ್ಪುವಂತೆಯೂ ಇಲ್ಲ. ಒಟ್ಟಾರೆ ಈ ದರಿದ್ರರ ಸಹವಾಸವೇ ಕಷ್ಟ! (ಪರದೆ ಬೀಳುವುದು).

## ದೃಶ್ಯ ೪

[ನಾಯಕರ ಮನೆ, ಒಳಭಾಗ. ಎದುರುಗಡೆ—ಶ್ರೀಕೃಷ್ಣನ ಚಿತ್ರವಿದೆ. ಸುತ್ತಲೂ ಪೂಜಾ ಸಾಮಗ್ರಿಗಳಿವೆ. ಸರಸ್ವತಿಯು ಶ್ರೀಕೃಷ್ಣನಿಗೆ ಮಂಗಳಾರತಿಯನ್ನೆತ್ತಿ ಭಕ್ತಿಯಿಂದ ಸ್ತೋತ್ರವನ್ನು ಹೇಳುವಳು.]

ಸರಸ್ವತಿ:

ಚಂದನ ಚರ್ಚಿತ ನೀಲ ಕಲೇವರ ಪೀತವಸನ ವನಮಾಲೀ ।
ಕೇಲಿ ಚಲನ್ಮಣಿ ಕುಂಡಲ ಮಂಡಿತಗಂಡ ಯುಗಸ್ಮಿತಶಾಲೀ ॥ ೧ ॥

[ಗೀತಗೋವಿಂದ.]

ಬ್ರಾಹ್ಮಣ: (ಪ್ರವೇಶಿಸಿ) ನಾರಾಯಣ, ನಾರಾಯಣ!

ಸ: (ನೋಡಿ) ಬನ್ನಿ; ಕುಳಿತುಕೊಳ್ಳಿ; ಬಾಯಾರಿಕೆ ತರಲೇನು?

ಬ್ರಾ: ಬೇಡವಮ್ಮ; ಈಗಷ್ಟೆ ಕುಡಿದು ಬಂದೆ.

ಸ: ಏನು ಬಂದಿರಿ? ಎಲ್ಲಿಂದ ಬಂದಿರಿ?

ಬ್ರಾ: ನಿಮ್ಮ ಅಂಗಡಿಯಿಂದಲೆ ಬಂದೆನಮ್ಮ. ಮಗನಿಗೆ ಉಪನಯನ ಮಾಡಬೇಕೆಂದು ಬಯಸಿ ನಿಮ್ಮ ಯಜಮಾನರೊಂದಿಗೆ ಸಹಾಯ ಕೇಳಿದೆ.

ಸ: ಓಹೊ! ನೀವೆಯೇ? ಅವರು ಹೇಳುತಿದ್ದರು, ಕೆಲದಿನಗಳಿಂದ ಪ್ರತಿದಿನ ಒಬ್ಬರು ಬಂದು ಪೀಡಿಸುತ್ತಾರೆ ಎಂದು........

ಬ್ರಾ: ನಾನೇ ಅಹುದಮ್ಮ! ಮತ್ತಾರೂ ಅಲ್ಲ ಒಂದೆರಡು ದಿನ ವಲ್ಲ; ಆರು ತಿಂಗಳಿಂದಲೂ ನಿಮ್ಮ ಅಂಗಡಿಯಿಂದ ಮನೆಗೆ, ಮನೆಯಿಂದ ಅಂಗಡಿಗೆ ಅಲೆಯುತಿದ್ದೇನಮ್ಮ ಕೊನೆಗೆ ಮಾಡಿದರು ಬಹಳ ದೊಡ್ಡ ಸಹಾಯ! ಅದನ್ನು ಹೇಳಿದರೆ ನಿಮಗೇ ನಾಚಿಕೆಯಮ್ಮ.

ಸ: ಕ್ಷಮಿಸಿರಿ; ಏನೋ ಬೇಸರದಿಂದ ಕಡಿಮೆ ಕೊಟ್ಟಿರಬಹುದು. ಈಗ ಮನೆಗೆ ಬಂದಲ್ಲಿ ಪುನಃ ತಿಳಿಸುವೆ. ತಾವು ಮುನಿಯಬಾರದು.

ಬ್ರಾ: ಉಪನಯನಕ್ಕೆ ಒಂದು ಕಾಸು! ಹುಟ್ಟು ದರಿದ್ರರಾದರೂ ಅಷ್ಟನ್ನು ಕೊಟ್ಟಾರೇ? ನಿಮ್ಮಂತವರಿಗೆ ಅದು ಭೂಷಣವೆ? ಭಗವಂತ ಎಲ್ಲವನ್ನೂ ಕರುಣಿಸಿದ್ದಾನೆ ನಿಮಗೆ! ನೀವಾದರೂ ಸಹಾಯಮಾಡಿರಮ್ಮ! ಹರಿಕೊಟ್ಟ ಕಾಲಕ್ಕೆ ಕೊಡಬೇಡವೆ ತಾಯಿ!

ಸ: (ಯೋಚಿಸಿ) ಏನು ಮಾಡಲಿ ಹೇಳಿ, ಅಂತಹ ಪುಣ್ಯ ಕಾರ್ಯಕ್ಕೆ ಸಹಾಯ ಮಾಡುವ ಅದೃಷ್ಟವನ್ನು ನಾನು ಪಡೆದುಕೊಂಡು ಬಂದಿಲ್ಲ.

ಬ್ರಾ: ಏನೋ ಅಮ್ಮ! ನೀವು ದಯಾವಂತರು ಪರೋಪಕಾರಿ ಗಳು; ಎಂದು ನಿಮ್ಮಲ್ಲಿಗೆ ಬಂದಿದ್ದೇನೆ. ನವಕೋಟಿ ನಾಯಕರ ಪತ್ನಿ ಯಾಗಿ ಬಡ ಬ್ರಾಹ್ಮಣನಿಗೆ ಸಹಾಯಮಾಡಲು ಅನುಕೂಲವಿಲ್ಲವೆಂದಾ ದರೆ....?

ಸ: ನೋಡಿ, ನಾನೇನೋ ಅವರ ಧರ್ಮಪತ್ನಿ! ಆದರೆ, ಇಲ್ಲಿಯ ಪ್ರತಿಯೊಂದು ಕಡ್ಡಿಯೂ ಅವರದ್ದು, ಅವರು ಸಂಪಾದಿಸಿದ್ದು. ಅವರ ಅನುಮತಿಯಿಲ್ಲದೆ ಕೊಡಲು ನನಗೆ ಅಧಿಕಾರವಿಲ್ಲ. ಪತಿಯನ್ನು ವಂಚಿಸಿ ಕೊಡುವುದು ಸತಿಯ ಧರ್ಮವೆ? ಅದು ನ್ಯಾಯವೆ? ನೀವೇ ಹೇಳಿ!

ಬ್ರಾ: ಪತಿಗೆ ವಂಚನೆಮಾಡಿ ಕೊಡು ಎಂದು ಕೇಳಲು ನಾನು ಬಂದಿಲ್ಲ. ಅವರ ಒಪ್ಪಿಗೆಯ ಧೈರ್ಯದಿಂದ ಕೊಡಿ.

ಸ: ಹಾಗೆ ಕೊಡಲು ಸಾಧ್ಯವಿಲ್ಲ.

ಬ್ರಾ: ನಿಮ್ಮದು ಸ್ವಂತದ್ದು ಏನಾದರೂ ಇಲ್ಲವೇನಮ್ಮ? ಅಲ್ಪಸ್ವಲ್ಪ ವಾದರೂ ಚಿಂತೆಯಿಲ್ಲ; ಶ್ರದ್ಧೆಯಿಂದ ಕೊಡುವ ವಸ್ತುವೇ ನನಗೆ ಪ್ರಿಯ ವಾದುದು.

ಸ: (ಸ್ವಗತ) ಇದೇನು? ಇವನ ಮಾತನ್ನು ಕೇಳುತಿದ್ದಂತೆ ಮನ ಸ್ಸೇಕೋ ತಲ್ಲಣಗೊಳ್ಳುತ್ತಿದೆ?

ಬ್ರಾ: ನಿಮ್ಮ ಮನೆಯಲ್ಲಿ ನಿಮ್ಮದು ಎನ್ನುವ ಯಾವ ವಸ್ತುವೂ ಇಲ್ಲವೆ? ವಿಚಿತ್ರವಾಗಿ ಮಾತಾಡುತ್ತೀರಮ್ಮ.

ಸ: ನೋಡಿ, ನನ್ನ ತವರಲ್ಲಿ ಹಾಕಿದ ಈ ನತ್ತು ಹೊರತು ಉಳಿದು ದೆಲ್ಲವೂ ಇವರದ್ದೇ; ಇವರು ಮಾಡಿಸಿದುದೇ.

ಬ್ರಾ: ಸ್ವಲ್ಪ ಯೋಚಿಸಿ ನೋಡಿರಮ್ಮ! ಭಾಗ್ಯಶಾಲಿಗಳೆಂದು ಬಯಸಿ ಬಂದೆ. ಮನಸ್ಸಿದ್ದಲ್ಲಿ ಮಾರ್ಗವಿದೆ. ವಿಸ್ತಾರವಾದ ಸಾಗರದಿಂದ ಒಂದು ಕೊಡ ನೀರು ತೆಗೆದರೆ, ಸಾಗರದಲ್ಲಿ ಕಡಿಮೆಯಾದೀತೆ? ಕೊಡಲು ಮನಸ್ಸಿಲ್ಲ ವಾದರೆ ಬಿಡಿ. ಎಲ್ಲಿಗಾದರೂ ಹೋಗಿ ಬೇಡುತ್ತೇನೆ. ಇನ್ನೂ ನನ್ನ ಭಾಗ್ಯ ಉದಯವಾಗಲಿಲ್ಲವೆಂದೇ ಬಗೆಯುತ್ತೇನೆ.

ಸ: (ಕೃಷ್ಣನ ಪ್ರತಿಮೆಯನ್ನು ನೋಡಿ) ಏನಿದು? ಭಗವಾನ್ ಕೃಷ್ಣನೇ ತನ್ನ ಕೈಯಲ್ಲಿದ್ದ ಮುರಲಿಯೊಂದಿಗೆ ಬೇಡುತಿದ್ದಂತೆ ಕಾಣುತ್ತಿದೆ! ಕಣ್ಣುಜ್ಜಿ ನೋಡಿ) ಅಹುದು; ಕೃಷ್ಣನೇ ಬೇಡುತಿದ್ದಾನೆ! ಇದೇನು ಮಾಯೆ ಕೃಷ್ಣ ನಿನ್ನದು! ಸಮಸ್ತ ಸಂಪತ್ತೂ ನಿನ್ನದೇ ಆಗಿರುವಾಗ ಈ ದೀನಳ ನತ್ತಿನ ಮೇಲೆ ಕಣ್ಣು ಬಿತ್ತೇ ನಿನಗೆ? ಯಾವ ಯಾವ ರೂಪವನ್ನು ಧರಿಸಿ ಪರಮಾತ್ಮನು ಬಾಗಿಲಿಗೆ ಬರುವನೆಂದು ಯಾರಿಗೆ ಗೊತ್ತು? ಇತರ ರಿಗಾದರೂ ನನ್ನ ನತ್ತಿಂದ ಆಗಬೇಕಾದುದೇನು? ಅಥವಾ ನನ್ನಲ್ಲಿ ನತ್ತನ್ನು ಕೇಳುವಷ್ಟು ಧೈರ್ಯವಾದರೂ ಇದೆಯೆ? ಪರಮಾತ್ಮನ ಇಚ್ಛೆ ಇದ್ದಂತಾ ಗಲಿ. (ಅವನ ಕಡೆ ತಿರುಗಿ) ವಿಪ್ರಶ್ರೇಷ್ಠ! ತೆಗೆದುಕೊ ಇದನ್ನು! ಸಂತೋಷದಿಂದ ನಿನ್ನ ಮಗನ ಉಪನಯನವನ್ನು ನೆರವೇರಿಸು. (ತೆಗೆದು ಕೊಡುವಳು.)

ಬ್ರಾ: ಮಹಾಭಾಗ್ಯಶಾಲಿನಿಯಾಗಮ್ಮ! ಪರಮಾತ್ಮನು ಸಂಪ್ರೀತನಾ ದನು. (ಹೋಗುವನು.)

ಸ: ಇದೇನು? ನತ್ತಿನೊಂದಿಗೆ ನನ್ನ ಹೃದಯವೂ ಚಲಿಸಿತೇನು? ಏನು ತೋಚಿತೊ? ಏಕೆ ಆ ಬುದ್ಧಿ ಬಂತೊ? ಇನ್ನು ಇವರಿಗೆ ತಿಳಿದರೆ? ಅಯ್ಯೋ! ಮೈ ಜುಂ ಎನ್ನುತ್ತಿದೆ. ಜಗದ್ರಕ್ಷಕನಾದ ಶ್ರೀಕೃಷ್ಣನೇ ಮುಂದಿರುವಾಗ ಮತ್ತೇತರ ಭಯ? (ಕೃಷ್ಣನಿಗೆ ಪುನಃ ನಮಸ್ಕರಿಸುವಳು.)

(ಪರದೆ ಬೀಳುವುದು.)

## ದೃಶ್ಯ ೫.

[ಬೀದಿ.]

ಬ್ರಾಹ್ಮಣ: ಐಶ್ವರ್ಯದ ಮದಾಂಧತೆಯು ಎಂಥವನನ್ನಾದರೂ ಹೇಗೆ ಪರಿವರ್ತನಗೊಳಿಸುವುದು! ಬ್ರಹ್ಮನ ಮಾನಸಪುತ್ರನಾದ ನಾರದನೇ ಈ ರೀತಿ ಧನಲೋಭಕ್ಕೆ ವಶನಾಗಿ ಕರ್ತವ್ಯವನ್ನು ಮರೆತನೆಂದರೆ ಮಿಕ್ಕುಳಿದ ಜನಸಾಮಾನ್ಯರ ಪಾಡೇನು? ಕಲಿಯುಗದಲ್ಲಿ ಶ್ರದ್ಧಾಭಕ್ತಿಗಳಿಂದ ಪರಮಾತ್ಮನ ನಾಮಸಂಕೀರ್ತನೆಯನ್ನು ಮಾಡಿದರೆ ಸಾಕು! ಅದು ಮುಕ್ತಿಗೆ ದಾರಿಯಾಗುವುದು ಎಂಬ ಅಂಶವನ್ನು ಮರ್ತ್ಯಲೋಕದಲ್ಲಿ ಬಿತ್ತಿಬಾ ಎಂದು ಗೀತಪ್ರಿಯನಾದ ನಾರದನನ್ನು ಕಳುಹಿಸಬೇಕೆಂದು ಬಯಸಿ "ನಾರದ! ಭಕ್ತಿಮಾರ್ಗವನ್ನು ಬಿತ್ತರಿಸುವುದರಲ್ಲಿ ನಿನಗಿಂತಲೂ ಮಿಗಿಲಾದವರಿಲ್ಲ. ಅದುಕಾರಣ ನಿನ್ನ ಗಾನಾಮೃತದಿಂದ ಜ್ಞಾನಾಮೃತವನ್ನು ಜನತೆಯಲ್ಲಿ ಪಸರಿಸು. ನಿನ್ನ ಜೀವನವು ಸುಖಕರವಾಗುವಂತೆ ನಿಖಿಳ ಸಂಪತ್ತನ್ನು ಅನುಗ್ರಹಿಸುವೆನು" ಎಂದು ಕಳುಹಿಸಿದರೆ ಈ ನಾರದನಿಗೆ ಧನದಲ್ಲಿ ಅದೆಂತಹ ಮೋಹ ಉಂಟಾಗಿದೆಯೊ? ಆಶ್ಚರ್ಯ! ವಿಷಯಭೋಗಗಳನ್ನು ಹೆಚ್ಚು ಹೆಚ್ಚು ಅನುಭವಿಸುತಿದ್ದಂತೆ ಮೋಹವೂ ಮತ್ತಷ್ಟು ಹೆಚ್ಚಾಗುವುದು! ಎಂಬ ಮಾತು ಸುಳ್ಳಲ್ಲ. ಇರಲಿ; ಈಗ ನತ್ತೇನೋ ದೊರಕಿದೆ. ಈ ನತ್ತಿದ ಮೂಲಕವೇ ಅವನಲ್ಲಿದ್ದ ಲೋಭಗುಣವನ್ನು ನಾಶಪಡಿಸಿ ಕರ್ತವ್ಯವನ್ನು ತಿಳಿಸಿ ಅವನ ಅವತಾರವನ್ನು ಸಾರ್ಥಕಗೊಳಿಸುವೆನು. (ತೆರಳುವನು.)

## ದೃಶ್ಯ ೬.

(ನಾಯಕರ ಅಂಗಡಿ. ನಾಯಕರು ಹಣವನ್ನು ಲೆಕ್ಕಿಸುತ್ತ ಕುಳಿತಿರುವರು.]

ಬ್ರಾ: (ಪ್ರವೇಶಿಸಿ) ಮಹಾ ಸಾಹುಕಾರರಿಗೆ ಮಹಾ ನಮಸ್ಕಾರಗಳು.

ನಾ: "ಪುನರಾಯಾನ್ ಮಹಾ ಕಪಿಃ!'' ಬಂತಲ್ಲ ಈ ಶನಿ! ಆಗ ಯಾವನೋ ಕೊಟ್ಟಿದ್ದ ಕಾಸನ್ನು ದಿಟ್ಟತನದಿಂದ ಎಸೆದು ಓಡಿದವನು. ನಾಚಿಕೆಗೆಟ್ಟು ಪುನಃ ಈಗ ಬಂದಿದ್ದಾನೆ! ಇನ್ನು ಅದೂ ಸಹ ಸಿಗಲಾರದು. ನಡೆ ಇಲ್ಲಿಂದ! ಹೂಂ, ನಡೆ ಹೊರಗೆ!

ಬ್ರಾ: ಸ್ವಾಮಿ, ಸಾಹುಕಾರರೆ! ಈಗ ಬೇಡಲು ಬಂದಿಲ್ಲ! ವ್ಯಾಪಾರಕ್ಕಾಗಿ ಬಂದುದು. ನಿಮ್ಮಲ್ಲಿ ಆಗುವುದಿಲ್ಲವೆಂದರೆ ಬಿಡಿರಿ, ಬೇರೆಡೆಗೆ ತೆರಳುವೆನು. ವ್ಯಾಪಾರಕ್ಕೆ ಎಲ್ಲಿಯಾದರೇನು!

ನಾ: (ತಗ್ಗಿದ ದನಿಯಿಂದ) ವ್ಯಾಪಾರಕ್ಕೆ? ಒಳ್ಳೆಯದು! ಬನ್ನಿ! ಕುಳಿತುಕೊಳ್ಳಿ! ಹನುಮ! ಆ ಪೆಟ್ಟಿಗೆ ತಾ. ಏನೇನು ಸಾಮಾನು ಬೇಕು, ಹೇಳಿ! ನಿಮಗೆ ಬೇಕಾದರೆ ಸ್ವಲ್ಪ ರಿಯಾಯಿತಿಯಲ್ಲಿ ಕೊಡುವ. ನೋಡಿ! ಉಪನಯನಕ್ಕೆ ಬೇಕಾದ ಒಡವೆಗಳೆಲ್ಲವೂ ಇವೆ. ಇದು ನೋಡಿ, ಬಂಗಾರದ ಉಪವೀತ! ಅದು ಪಂಚಪಾತ್ರೆ, ಉದ್ಧರಣೆ ಕೈಬಟ್ಟಲು, ಗೋಪೀಚಂದನ ಮುದ್ರೆ; ಏನು ಬೇಕು ಹೇಳಿರಿ.

ಬ್ರಾ: ನನ್ನದೊಂದು ಮಾಲಿಗೆ ಎಷ್ಟು ಕ್ರಯ ಬಂದೀತೆಂದು ಮೊದಲು ಹೇಳಿರಿ; ಆ ಮೇಲೆ ಬೇಕಾದ ಸಾಮಾನುಗಳನ್ನು ತೆಗೆದುಕೊಳ್ಳುವಾ. (ನತ್ತನ್ನು ಕೊಡುವನು.)

ನಾ: ಹಾಗೋ? ಕೊಡಿ (ನತ್ತನ್ನು ಒರೆಕಲ್ಲಿನಲ್ಲಿ ತಿಕ್ಕುತ್ತ-ಸಂಶಯದಿಂದ) ಇದೆಲ್ಲಿ ಸಿಕ್ಕಿತು ನಿಮಗೆ? ಎಲ್ಲಿಂದ ತಂದಿರಿ?

ಬ್ರಾ: ಅದೇನು ಸಂದೇಹದಿಂದ ನೋಡುತಿದ್ದೀರಿ? ಕದ್ದು ತಂದ ಸಾಮಾನಲ್ಲ. ಮೂಗಿನಲ್ಲಿದ್ದ ನತ್ತನ್ನು ಎಲ್ಲಾದರೂ ಕದಿಯಲು ಸಾಧ್ಯವಿದೆಯೆ ಸ್ವಾಮೀ? ಒಂದು ಅಂದಾಜು ಕ್ರಯಮಾಡಿ ಅಷ್ಟು ಹಣ ಕೊಡಿ. ಮನಸ್ಸಿಲ್ಲವೆಂದಾದರೆ ಬಿಡಿ, ಬೇರೆ ಅಂಗಡಿಗೆ ಹೋಗುವೆ.

ನಾ: ಮತ್ತೇನಿಲ್ಲ. ಇಂತಹ ಮೂಗುತಿ ನಮ್ಮಲ್ಲೊಂದಿತ್ತು. ಮಾಡಿದ ರಚನೆ, ಮುತ್ತು, ವಜ್ರ,—ಎಲ್ಲಾ ಅದೇ ರೀತಿಯದಾದುದರಿಂದ ಇದೆಲ್ಲಿಂದ ಬಂತು ಎಂದು ಕೇಳಿದೆ. [ನೋಡಿ, ಯೋಚಿಸಿ] ನಿಮಗೀಗ ಎಷ್ಟು ಹಣ ಬೇಕು?

ಬ್ರಾ: ನಾನೆಷ್ಟೆಂದು ಹೇಳಲಿ? ನೀವು ಕೊಟ್ಟಷ್ಟು ಬೇಕು. ನಿಮಗೀಗ ಸಮಯವಿಲ್ಲದಿದ್ದರೆ ನಾಳೆ ಸಾಕು. ಸರಿಯಾಗಿ ಖರೀದಿ ಮಾಡಿ ಹಣ ಕೊಡಿರಿ. ಇಂದಲ್ಲವಾದರೆ ನಾಳೆಯೇ ಆಗಲಿ. ನಿಮ್ಮಂತಹ ಶ್ರೀಮಂತರಲ್ಲಿ ನನಗೆ ಎಳ್ಳಷ್ಟೂ ಅಪನಂಬಿಕೆ ಇಲ್ಲ. ಆರು ತಿಂಗಳು ಕಾದವನು ಆರು ಗಳಿಗೆ ಕಾಯಲಾರೆನೆ? ಬರುತ್ತೇನೆ ಸಾಹುಕಾರರೆ! [ಎದ್ದು ನಡೆಯುವನು.]

ನಾ: ಎಲಾ ಎಲಾ! ವಿಚಿತ್ರ ಬ್ರಾಹ್ಮಣ. ನತ್ತನ್ನೂ ಒಯ್ಯಲಿಲ್ಲ. ಹಣವನ್ನೂ ಕೊಂಡೊಯ್ಯಲಿಲ್ಲ. ಇವನೇಕೆ ಬಂದ? ಆರು ತಿಂಗಳಿಂವಲೂ ಏಕೆ ಪೀಡಿಸಿದ? ಈಗ ಎಲ್ಲವನ್ನೂ ಬಿಟ್ಟು ಹೋದನೇಕೆ? ಇವನ ನಡೆ ನುಡಿ ಯೆಲ್ಲ ವಿಚಿತ್ರ ರೀತಿಯಾದ್ದಾಗಿದೆ. ಇದನ್ನು ಪರೀಕ್ಷಿಸಿಯೇ ತೀರಬೇಕು. ಹನುಮ! ಏಯ್ ಹನುಮ!

ಹನುಮ: ಓಯ್! ಬಂದೆ ಬುದ್ಧಿ!

ನಾ: ಇಕೊ ನೋಡು; ಆ ಬ್ರಾಹ್ಮಣ ಎಲ್ಲಿಗೆ ಹೋಗುತ್ತಾನೆ? ಏನು ಮಾಡುತ್ತಾನೆ? ಅವನ ಮನೆಯೆಲ್ಲಿ? ಎಂಬುದನ್ನೆಲ್ಲ, ಮೆಲ್ಲನೆ, ಅವನಿಗೆ ತಿಳಿಯದಂತೆ ಹೋಗಿ, ತಿಳಿದುಕೊಂಡು ಬಾ.

ಹ: ಅಪ್ಪಣೆ ಬುದ್ಧಿ. [ಹೋಗುವನು.]

ನಾ: [ನತ್ತನ್ನು ನೋಡುತ್ತ] ಬಹುಶಃ ನನ್ನವಳದ್ದೇ ನತ್ತು. ಪ್ರತಿ ದಿನ ಕಂಡು ಕಂಡು ಅಷ್ಟು ಗುರುತಿಲ್ಲವೆ? ಒಂದು ವೇಳೆ ನತ್ತು ಇವಳದ್ದೇ ಆಯಿತೆಂದಾದರೆ [ಕೋಪದಿಂದ] ಅವಳನ್ನು ದೇವರೂ ಕಾಪಾಡಲಾರನು! ಏನು, ಒಂದೇ ಎರಡೆ? ನೂರಿನ್ನೂರು ವರಹ ಬೆಲೆ ಬಾಳುವ ತಾಜಾ ವಜ್ರದ ನತ್ತು! ಇದನ್ನು ಆ ದರಿದ್ರ ಬ್ರಾಹ್ಮಣನಿಗೆ ಕೊಡುವುದೆಂದರೆ? [ಯೋಚಿಸಿ] ಅದೇಕೆ ಕೊಟ್ಟಳು? ಬೇಡುವವರಿಗೆ ಇಂತಹ ನತ್ತನ್ನು ಕೊಡುವುದುಂಟೆ? ಏನೋ ಇರಬೇಕು ಇಲ್ಲಿ ಗುಟ್ಟು! ಈ ಗುಟ್ಟನ್ನು ರಟ್ಟು ಮಾಡದೆ ಬಿಡದೆನ್ನ ಸಿಟ್ಟು! [ಅದನ್ನು ಅಂಗಿಯ ಜೇಬಿನಲ್ಲಿಟ್ಟು ಹೋಗುವನು.]

## ದೃಶ್ಯ ೭.

[ನಾಯಕರ ಮನೆಯ ಒಳ ಭಾಗ. ನಾಯಕರು ಪ್ರವೇಶಿಸುತಿದ್ದಂತೆಯೇ ಹೆಂಡತಿಯನ್ನು ಕರೆಯುವರು.]

ನಾ: ಯಾರೇ ಅಲ್ಲಿ? ಎಲ್ಲಿ ಹೋದಿಯೋನೆ?

ಸ: (ಬಾಗಿಲಲ್ಲೇ ನಿಂತು) ಏನು, ಕರೆದಿರಾ?

ನಾ: ಹೌದು, ಕರೆದೆ. ಅಗತ್ಯದ ಕೆಲಸವಿತ್ತು.

ಸ: ಏನು? (ಸ್ವಲ್ಪ ಮುಂದೆ ಬರುವಳು).

ನಾ: ಬಾ ಮುಂದೆ; ಒಂದು ವಿಚಾರವಿದೆ. (ನೋಡಿ) ನಿನ್ನ ಮುಖ ವೇನು ಇಂದು ಹಿಡಿಹಿಡಿಗೊಂಡಂತಿದೆ?

ಸ: ಮುಖಕ್ಕೇನಾಗಿದೆ?

ನಾ: ಮೂಗು ಬೋಳಾಗಿದೆ. ಅದೇ ಅವಲಕ್ಷಣ! ಎಲ್ಲಿದೆ ನಿನ್ನ ನತ್ತು?

ಸ: (ಮೌನವಾಗಿ ನೆಲವನ್ನೇ ನೋಡುವಳು).

ನಾ: ಏನು? ಮೌನವೇಕೆ? ಎಲ್ಲಿಟ್ಟಿರುವೆ?

ಸ: ತೆಗೆದಿಟ್ಟಿರುವೆ.

ನಾ: (ಅಣಕದಿಂದ) ಇಟ್ಟಿರುವೆ! ಇಟ್ಟಿರುವೆಯೋ, ಕಂಡವರಿಗೆ ಕೊಟ್ಟಿರುವೆಯೋ?

ಸ: (ಮೌನ)

ನಾ: ಎಲ್ಲಿಗೆ ಹೋಯಿತು ನಿನ್ನ ನಾಲಿಗೆ? ಏನು? ಮಾತು ಬರುವು ದಿಲ್ಲವೆ? ಇಟ್ಟಿರುವೆಯಾದರೆ ಬೇಗನೆ ತಂದುಕೊಡು. ಹೂ! ಬೇಗನೆ ತಂದು ಕೊಡು! ತಂದುಕೊಟ್ಟ ಮೇಲೆಯೇ ಮುಂದಿನ ಮಾತು!

ಸ: ಇಷ್ಟು ವರ್ಷ ನಾನು ನಿಮ್ಮೊಡನೆ ಬಾಳುವೆ ನಡೆಸಿದ್ದೇನೆ. ನನ್ನ ಗುಣಗಳೆಲ್ಲವೂ ನಿಮಗೆ ತಿಳಿದಿವೆ. ಈ ಹೊತ್ತು ನನಗಿಂತಲೂ ನನ್ನ ನತ್ತು ನಿಮಗೆ ಪ್ರಿಯವಾಯಿತೇ?

ನಾ: ಹಾಗೆಂದಾದರೆ ತಾ ಬೇಗ ನತ್ತು! ನತ್ತಿಲ್ಲವೆಂದಾದರೆ ನೀನೂ ಬೇಡ. ಏನು, ಅಲ್ಪವೇ ಸ್ವಲ್ಪವೆ? ನೂರಾರು ವರಹ ಬೆಲೆ ಬಾಳುವ ವಜ್ರದ ನತ್ತು! ಕಣ್ಣ ಕೆಳಗಿರುವ ನತ್ತು ಕಾಣೆಯಾಗುವುದುಂಟೆ? ನೀನು ಯಾರಿಗೋ ಕೊಟ್ಟಿರುವೆ! ನತ್ತನ್ನು ತೋರಿಸಿದರೆ ಮಾತ್ರ ನನಗೂ ನಿನಗೂ ಸಂಬಂಧ! ಇಲ್ಲವೆಂದಾದರೆ ಇಲ್ಲಿಗೇ ಮುಗಿಯಿತೆಂದು ತಿಳಿ. ನನಗೆ ನಾನೇ; ನಿನಗೆ ನೀನೇ. ಈ ಮನೆಯಲ್ಲಿ ಮುಂದೆ ಒಂದು ಕ್ಷಣ ನಿಂತೆಯೆಂದರೆ ನನ್ನ ಎದೆಯ ಮೇಲೆ ನಿಂತಂತೆ. ನಿನ್ನ ನೀರಿನ ಋಣ ಮುಗಿಯಿತು. ಹೂ, ತಂದು ತೋರಿಸು. ನಡೆ ಒಳಗೆ! ನತ್ತಿಲ್ಲದೆ ಮೆಟ್ಟು ಮಿಸುಕಲು ಬಿಡೆನು! ಮತ್ತೂ ನೋಡುತ್ತಿರುವುದೇನು! (ಸರಸ್ವತಿಯು ಒಳಗೆ ಹೋಗುವಳು. ಕೋಪಾವೇಶದಿಂದ ತತ್ತರಿಸುತ್ತ ನಾಯಕರು ಅತ್ತಿತ್ತ ತಿರುಗಾಡುವರು.)

## ದೃಶ್ಯ ೮.

(ಒಳಮಂದಿರ. ಶ್ರೀಕೃಷ್ಣ ಮೂರ್ತಿಯ ಮುಂದೆ ಸರಸ್ವತಿಯು ವಿಷದ ಬಟ್ಟಲನ್ನು ಹಿಡಿದಿರುವಳು.)

ಸರಸ್ವತಿ: ಪರಮಾತ್ಮ! ನಿನ್ನ ಮೇಲಿನ ಭಕ್ತಿಯಿಂದ, ನಿನಗೆ ಸಂಪ್ರೀತಿಯಾಗಲಿ ಎಂದು ನಿನ್ನ ಪಾದಾರವಿಂದಗಳಿಗೇ ಅದನ್ನು ಅರ್ಪಿಸಿದೆ. ಆದರೆ, ಇಷ್ಟು ಮಾತ್ರದಿಂದ ನನ್ನ ಮೇಲೆ ಅಪವಾದ ಒದಗಿತು. ದಾನ ಬುದ್ಧಿಯಿಂದ ಕೊಟ್ಟಿದ್ದರೂ ಅವರ ಭಾವನೆ ವಿಪರೀತವಾಯಿತು. ಬಂದಿರುವ ಆಪತ್ತನ್ನು ಪರಿಹರಿಸಬೇಡವೆ ತಂದೆ? ದ್ರೌಪದಿಯ ಮಾನವನ್ನು ಕಾಪಾಡಿದ ಪಾವನ ಮೂರ್ತಿಯಲ್ಲವೆ ನೀನು!'ಭಕ್ತಾಧೀನ ಬಂಧು'ವೆಂದಲ್ಲವೆ ನಿನ್ನ ಕೀರ್ತಿ! ಭಗವಂತ! ಆತ್ಮಹತ್ಯಾದೋಷ ಅಂಟದಂತೆ ಅನುಗ್ರಹಿಸು. ನಿನ್ನ ಪಾದಾರವಿಂದದಲ್ಲಿ ನನಗಷ್ಟು ಸ್ಥಳ ಕೊಡು! ಸರ್ವಾಪರಾಧಗಳನ್ನೂ ಕ್ಷಮಿಸು ತಂದೆ. ಇದೋ ನಿನ್ನೆಡೆಗೇ ಬರುವೆ. (ಕುಡಿಯಲು ತೊಡಗುವಷ್ಟರಲ್ಲಿ ಮೇಲ್ಗಡೆಯಿಂದ ಚಿಕ್ಕ ಬಿಳಿಯ ವಸ್ತು ಬಿದ್ದಂತಾಗುವುದು.)

ಇದೇನು ಬಿದ್ದುದು? (ನೋಡಿ) ಹಾ, ನತ್ತು! ಇದು ವರೆಗೆ ಧರಿಸಿಕೊಂಡಿದ್ದ ನತ್ತು! ವಿಪ್ರವರನಿಗೆ ದಾನಕೊಟ್ಟ ನತ್ತು! ಕೃಷ್ಣ! ಕೃಷ್ಣ! ಅನಾಥ ಬಂಧು! ಅದೇನು ಪ್ರೀತಿ ನಿನಗೆ ನಿನ್ನ ಭಕ್ತರ ಮೇಲೆ! ನಮ್ಮನ್ನು ಪರೀಕ್ಷಿಸಬೇಕೆಂದೇ ಈ ಲೀಲಾ ನಾಟಕವನ್ನು ರಚಿಸಿದೆಯೇನು? ನಿನ್ನ ಪರೀಕ್ಷೆಗೆ ಈಡಾಗುವಷ್ಟು ಶಕ್ತಿಯಿದೆಯೆ ದೇವ ನಮ್ಮಲ್ಲಿ? ನಿಗಮಾಗಮಗಳಿಗೇ ಅಗೋಚರನಾಗಿರಲು, ನಮ್ಮಂಥವರಿಂದ ನಿನ್ನ ಮಹಿಮೆಯನ್ನು ತಿಳಿಯಲು ಅಳವೆ? ನಿನ್ನ ಇಚ್ಛೆಯಿದ್ದಂತಾಗಲಿ. ಇದನ್ನು ಈಗಲೇ ಕೊಟ್ಟು ಬರುವೆನು. (ಹೋಗುವಳು)

ನಾಯಕರು: (ಪ್ರವೇಶಿಸಿ) ಎಲ್ಲಿಗೆ ಹೋದಿಯೇನೆ? ಒಳಗೆ ಹೋದವಳು ಮುಳುಗಿಯೇ ಬಿಟ್ಟೆಯೇನು? ಕ್ಷಣದಲ್ಲೇ ಬರುತ್ತೇನೆ ಎಂದವಳು........(ಶತಪಥ ಹಾಕುತ್ತಿರುವರು.)

ಸ: (ಪ್ರವೇಶಿಸಿ) ತಡವಾದುದಕ್ಕೆ ಕ್ಷಮೆಯಿರಲಿ. ನತ್ತನ್ನು ತಂದಿರುವೆನು. (ಕೊಟ್ಟು, ಹೋಗುವಳು.)

ನಾ: ಹಾ! ತಂದಾಯಿತೆ? (ಆಶ್ಚರ್ಯದಿಂದ ನೋಡುತ್ತ) ಸರಿ, ಅದೇ ನತ್ತು! (ತನ್ನ ಅಂಗಿಯ ಜೇಬನ್ನು ಹುಡುಕಿ) ಏನಾಯಿತು? ಏನಾಯಿತು?

ಇಷ್ಟು ಬೇಗ ಎಲ್ಲಿಗೆ ಹೋಯಿತು? ಆಶ್ಚರ್ಯ! ಇಟ್ಟ ವಸ್ತು ಮಾಯವಾಗು ವುದೆಂದರೆ! ನಾನೇ ಎಚ್ಚರಿಕೆಯಿಂದ ಒಳಜೇಬಿನಲ್ಲಿಟ್ಟಿದ್ದೆ. ಈಗದು ಮಂಗ ಮಾಯ! ಒಂದು ಕ್ಷಣದ ಮೊದಲು ನೋಡಿದ್ದೆ. ಆಗ ಇತ್ತು! ಈಗ ಇಲ್ಲ! ಮತ್ತೆಲ್ಲಿಗೆ ಹೋಗಿರಬಹುದು? (ಅಂಗಿ ತೆಗೆದು ಹುಡುಕುವರು.)

ಹನುಮ (ಪ್ರವೇಶಿಸಿ) ಬುದ್ಧಿ! ಬುದ್ಧಿ!

ನಾ: ಏನಾಯ್ತೋ? ಏನದು ಅಷ್ಟು ಗಾಬರಿ?

ಹ: ಬುದ್ಧಿ! ಒಂದು ಆಚ್ಚರ್ಯದ ಸಂಗ್ತಿ ನಡೆದೈತೆ!

ನಾ: ಏನೋ ಅದು ಅಷ್ಟು ಆಶ್ಚರ್ಯ?

ಹ: ನನ್ನ ಜನ್ಮದಾಗೇ ಹಂಗೆ ಕಂಡಿಲ್ಲ ಬುದ್ವಿ.

ನಾ: ಏನೋ ಅದು! ಬೇಗ ಹೇಳೊ!

ಹ: ತಾವು ಕಳ್ಸಿಕೊಟ್ರಿಲ್ಲಾ, ಆ ಹಾರುವಯ್ಯನ ಸಂಗ್ಡ ಹೋಗಿ ಅವನ ವಿಚಾರ ತಿಳ್ಕೊಂಡು ಬಾ ಅಂತ.

ನಾ: ಹೌದು, ತಿಳಿದುಕೊಂಡು ಬಂದೆಯೇನು?

ಹ: ನಾನು ಬುದ್ಧಿ, ಅವ್ನ ಹಿಂಗಡೇಲಿ, ಅವ್ನಿಗೆ ತಿಳಿಯುದ ಹಾಂಗೆ ಮೆಲ್ ಮೆಲ್ನೆ ಹೊಂಟುಹೋದೆ. ಆ ಹಾರುವ ಪಾಂಡುರಂಗ ಇಟಲನ ಗುಡೀ ತನಕಾ ಹೋದ್ರು! ಆ ಮೇಲೆ ಬುದ್ದಿ, ನಾನು ನೋಡ್ತ ನೋಡ್ತ ಇದ್ದ ಹಾಂಗೆ, ಗುಡಿಯು ಬಾಗಿಲು ಮುಚ್ಚಿದ್ದ ಹಾಂಗೆ, ಬೀಗ ಮುದ್ರೆ ಮಾಡಿದ್ದಾಂಗೆ ಬಾಗಿಲು ತೆಗೆದು ಒಳಗೆ ಸೇರಿಬಿಟ್ರು ಬುದ್ದಿ. ಎಂತಾ ಅಚ್ಚರೀನೋ ಏನೋ?

ನಾ: ನಿಜವೇನೊ? ಅಥವಾ ಮಬ್ಬು ಕಣ್ಣಿಂದ ನೋಡ್ತಾ ಇದ್ಯೋ?

ಹ: ನಿಮ್ಮ ಪಾದದಾಣೆ ಅಯ್ನೋರೆ! ಸುಳ್ಳುಗಿಳ್ಳು ಆಗಿದ್ರೆ ನನ್ ನಾಲಗೆ ಸೀಳಾಗಿ ಹೋಗಿ ಬಿಟ್ಟೇತ್ರಿ! ಕಣ್ಣಾರೆ ಕಂಡಿವ್ನಿ! ಬೀಗ ಬಿದ್ದಿತ್ತಾ ಇಲ್ವಾಂತ ಹತ್ತಿರ ಹೋಗಿ ನೋಡಿವ್ನಿ. ನಿಜಕ್ಕೂ ದೇವರೊಳಗೆ ಸೇರಿ ಕೊಂಡು ಬಿಟ್ಟಾರ್ರೀ.

ನಾ: ನಿಜವೇ ಹನುಮಾ? (ಸ್ವಗತ) ಇದೇನು ಈ ರೀತಿ? ಹೀಗಾಗಲೇನು ಕಾರಣ? ಆವನು ನಿಜವಾಗಿಯೂ ದರಿದ್ರ ಬ್ರಾಹ್ಮಣನೆ? ಮಾಯಾವಿಯೆ? ಹನುಮ ಸುಳ್ಳು ಹೇಳಲಾರ. ಅಷ್ಟು ಭದ್ರವಾಗಿ ಇಟ್ಟುಕೊಂಡಿದ್ದ ನತ್ತು ಮಾಯವಾದ ಬಗೆ ಹೇಗೆ? ಇಲ್ಲಿ ಮಾನವಶಕ್ತಿ ನಡೆದಿಲ್ಲ; ಕಾಣದ

ಕ್ಕೆ ಕೆಲಸಮಾಡಿಹೆ. ಇದರಲ್ಲೇನೋ ವಿಚಿತ್ರವಿದೆ. ಅವಳನ್ನೇ ಕರೆದು ಕೇಳುವೆ. ಸರಸ್ವತೀ, ಏ ಸರಸ್ವತೀ!

ಸ: ಏನು? ಮತ್ತೇಕೆ ಕರೆದಿರಿ?

ನಾ: (ಉದ್ರೇಕದಿಂದ) ಅದೇನೋ ಸಿಕ್ಕಿತು. ಏನೋ ಒಂದು ವಿಚಿತ್ರ ನಡೆದ ಹಾಗಿದೆ. ಅಂಗಡಿಯಿಂದ ನತ್ತೊಂದನ್ನು ತಂದಿದ್ದೆ. ನಿನ್ನದೇ ಇರಬಹುದು ಎಂದು ಧಾವಿಸಿ ಬಂದೆ. ನಿನ್ನ ಮೂಗಿನಲ್ಲೂ ಅದು ಇದ್ದಿಲ್ಲ; ಕಟ್ಟಕಡೆಗೆ ನೀನು ಅದನ್ನು ತಂದುಕೊಟ್ಟೆ. ಈಗ ನನ್ನಲ್ಲಿದ್ದ ನತ್ತಿಲ್ಲ; ಏನಾದರೂ ವಿಶೇಷ ನಡೆಯಿತೆ?

ಸ: ಒಬ್ಬ ಬ್ರಾಹ್ಮಣ; ಆರು ತಿಂಗಳಿಂದಲೂ ಬರುತಿದ್ದಾನಂತೆ. ಏನಾದರೂ ಕೊಡಬೇಕೆಂದು ಪೀಡಿಸಿದ. ನನಗೇನು ಬುದ್ಧಿ ತೋರಿತೊ! ನತ್ತನ್ನು ತೆಗೆದು ಕೊಟ್ಟೆ.

ನಾ: ಸರಿ! ಅದೇ ಬ್ರಾಹ್ಮಣ ನನ್ನೊಡನೆ ಮಾರಲು ಕೊಟ್ಟನು! ಮುಂದೇನಾಯಿತು?

ಸ: ಮುಂದೆ ನೀವು ಬಂದು—ನತ್ತನ್ನು ಕೊಡದೆ ಮೆಟ್ಟುವಿಸುಕಲೀ ಯೆನು ಎಂದು ಕಡಾಸನ ಹಾಕಿ ಕುಳಿತಿರಿ. ಬೇರೆ ದಾರಿ ತೋರದೆ ಕಿವಿಯ ವಜ್ರವನ್ನರೆದು ಕುಡಿಯಲು ತೊಡಗಿದೆ. ಅಷ್ಟರಲ್ಲೆ ಶ್ರೀಕೃಷ್ಣನ ಮೂರ್ತಿ ಚಲಿಸಿದಂತಾಯಿತು. ಬಟ್ಟಲಲ್ಲಿ ನತ್ತು ಕಾಣಿಸಿತು. ತಂದು ಒಪ್ಪಿಸಿದೆ. ಮತ್ತೇನನ್ನೂ ಅರಿಯೆ.

ನಾ: ಸರಸ್ವತಿ! ನಿಜ! ನಿಜ! ಎಂದೆಂದಿಗೂ ನಿಜ! ಸೂರ್ಯ ಚಂದ್ರರ ಸಾಕ್ಷಿಯಾಗಿಯೂ ನಿಜ! ಹಾರುವ ಮಾತ್ರರೂ ಅಲ್ಲ! ದ್ವಿಜರೂಪಿಯಾದ ಶ್ರೀಕೃಷ್ಣ! ನೀನೇ ಭಾಗ್ಯಶಾಲಿನಿ ಸರಸ್ವತಿ! ಮಾತ್ರ ಹನುಮನೂ ಪುಣ್ಯಶಾಲಿ! ಪರಮಾತ್ಮನು ಗುಡಿಯನ್ನು ಪ್ರವೇಶಿಸಿದುದನ್ನು ನೋಡಿದನು! ಪರಮಾತ್ಮನ ಸ್ವರೂಪವನ್ನು ಕಂಡು ಅವನನ್ನು ಒಲಿಸಿ ಕೊಂಡೆ ನೀನು! ನಾನು........ನಾನು ಕಡುಪಾಪಿ! (ದುಃಖದಿಂದ ಉನ್ಮತ್ತನಾಗಿ) ಯಾಚಕನಾಗಿ ಮನೆಯ ಬಾಗಿಲಿಗೆ ಬಂದರೂ ಹೊರಗಟ್ಟಿದ ನಿರ್ಭಾಗ್ಯನು! ನನ್ನಲ್ಲಿ ವಿವೇಕವನ್ನುಂಟುಮಾಡಲು ಆರು ತಿಂಗಳಿಂದ ಯತ್ನಿಸುತಿದ್ದರೂ ಧನಮದದಿಂದ ಬಯ್ದ ಕೃತಘ್ನನು ನಾನು! ಮನೆಗೆ ಬಂದಿರುವ ಪರದೈವತವನ್ನು ಬಿರುನುಡಿಗಳಿಂದ ತಿರಸ್ಕರಿಸಿದವನು ನಾನು!

ಮೋಹಾಂಧಕಾರವನ್ನು ಹೋಗಲಾಡಿಸಲು ಪರಮಾತ್ಮನೇ ಬಂದಿದ್ದರೂ ಕಣ್ಣಿದ್ದೂ ಕುರುಡನಾದೆ; ಕಿವಿಗಳಿದ್ದೂ ಕಿವುಡನಾದೆ; ಕಾಲ್ಗಳಿದ್ದೂ ಹೆಳವನಾದೆ. ನವಕೋಟಿ ಧನವಿದ್ದೂ ಭಕ್ತಿಶೂನ್ಯದರಿದ್ರನಾದೆ. ಆ ಜಗನ್ನಿಯಾಮಕನು ಬಂದು ಆರು ತಿಂಗಳು ಬೇಡಿದರೂ ಒಂದು ಚಿಕ್ಕಾಸನೂ ಕೊಡದ ಮಹಾಪಾಪಿಯಾದೆ ನಾನು! ಅಯ್ಯೋ, ಪಶ್ಚಾತ್ತಾಪದಿಂದ ಕುದಿಯುತ್ತಿದೆ ಈ ದೇಹ! ಸಹಿಸಲಾರೆ! ಎಂತಹ ಅಮೂಲ್ಯ ಸಮಯವನ್ನು ದುರುಪಯೋಗಗೊಳಿಸಿದೆ! ಪರಮಾತ್ಮನ ನಿರಂತರ ಧ್ಯಾನಕ್ಕಿಂತಲೂ ಈ ಕ್ಷಣಿಕ ಧನ ಮಿಗಿಲಾಯಿತೇ ನನಗೆ? ಎಚ್ಚರಿಸಿದರೂ ಎಚ್ಚರಗೊಳ್ಳದೆ ಹೋಯಿತೇ ನನ್ನ ಕ್ರೂರ ಮನಸ್ಸು! (ತುಸು ತಡೆದು ಸಮಾಧಾನದಿಂದ) ಸಾಕು ಈ ಸಂಸಾರ! ಸಾಕು ಈ ಧನಮೋಹ! ಶ್ರೀ ಕೃಷ್ಣನ ದರ್ಶನವನ್ನಲ್ಲದೆ ಮತ್ತಾವುದನ್ನೂ ಇನ್ನೊಲ್ಲೆ; ಸರಸ್ವತಿ! ಇಗೊ, ಧಾರೆ ಎರೆ. ಪರಮಾತ್ಮನ ಭಕ್ತಿಸಾಮ್ರಾಜ್ಯವೇ ಕೈಯಲ್ಲಿ ದೊರಕಿರಲು ಈ ಅಲ್ಪ ಧನವೇಕೆ ಹೇಳು! (ಸರಸ್ವತಿಯು ನೀರು ಎರೆಯುವಳು.) ಶ್ರೀಕೃಷ್ಣಾರ್ಪಣ ಮಸ್ತು!

## ದೃಶ್ಯ ೯.

[ಬೀದಿ. ನಾಯಕರು ದಾಸರ ವೇಷದಲ್ಲಿ ಬರುವರು.]

ನಾ: ಅದೇನು ಪುರಂಧರಾಮನ ಲೀಲೆ! ಭಕ್ತರ ದುಷ್ಟಗುಣಗಳನ್ನು ನಾಶಪಡಿಸಬೇಕೆಂದು ಅದೆಷ್ಟು ಹಂಬಲ ಭಗವಂತನಿಗೆ! ನನ್ನಲ್ಲಿದ್ದ ಲೋಭ ಗುಣದಿಂದಾಗಿ ಲೋಕಕ್ಕೆ ದುಷ್ಟನಾಗಿದ್ದೆ; ಜಗತ್ತಿಗೆ ಹೊರೆಯಾಗಿದ್ದೆ. ಭೂಮಿಗೆ ಭಾರವಾಗಿದ್ದೆ. ಅದನ್ನು ಹೋಗಲಾಡಿಸಲು ಪರಮಾತ್ಮನೇ ವಿಪ್ರರೂಪದಿಂದ ಬಂದನು. ಸಾಮಾನ್ಯ ಬ್ರಾಹ್ಮಣನಾಗಿದ್ದರೆ ಆರು ತಿಂಗಳಿಂದಲೂ ಬರುತಿದ್ದನೆ? ಅದನ್ನು ಯೋಚಿಸದೆ ಮನೆಯಲ್ಲಿ ರಾದ್ಧಾಂತ ಮಾಡಿದೆ. ಕೊನೆಗಂತೂ ವಿವೇಕೋದಯವಾಯಿತು! ಅದೇ ಪುಣ್ಯ! ಅದೇ ಭಾಗ್ಯ! ಅದೇ ಜನ್ಮಸಾಫಲ್ಯ! ಆಹಾ! ತ್ಯಾಗಕ್ಕೆ ಸಮಾನವಾದ ಆನಂದವಿನ್ನಾವುದು! ಎಂತಹ ಆನಂದ! ಎಂತಹ ಶಾಂತಿ! ಮುಂದಿನ್ನು ಸದ್ಗುರುವಿನ ಪಾದಸೇವೆಯನ್ನೆಸಗಿ, ಉಪದೇಶವನ್ನು ಪಡೆದು ಜನ್ಮ ಸಾರ್ಥಕ್ಯಗೊಳಿಸುವೆನು. (ಹೋಗುವರು.)

## ದೃಶ್ಯ ೧೦.

[ವ್ಯಾಸರಾಯ ಸ್ವಾಮಿಗಳ ವ್ಯಾಖ್ಯಾನ ಸಿಂಹಾಸನ. ಸ್ವಾಮಿಗಳು ಪೀಠದಲ್ಲಿರುವರು. ನಾಯಕರ ಪ್ರವೇಶ.]

ನಾ: ಶ್ರೀ ವ್ಯಾಸರಾಯ ಗುರುಗಳಿಗೆ ನಮೋ ನಮಃ, ನಮೋ ನಮಃ! (ಸಾಷ್ಟಾಂಗ ವಂದಿಸುವರು.)

ವ್ಯಾಸ: ನಾರಾಯಣ, ನಾರಾಯಣ! ಎದ್ದೇಳು, ಎದ್ದೇಳು! ಇದಾರು? ನವಕೋಟಿ ನಾಯಕರು! ಚಕ್ರವರ್ತಿಗಳಿಗೆ ಸಾಲಕೊಡತಕ್ಕ ಮಹಾಭಾಗ್ಯಶಾಲಿಗಳು! ಇದೇನು ರೂಪ? ಇದೇನು ವೇಷ? ವಜ್ರದ ಕುಂಡಲಗಳಿದ್ದ ಕಿವಿಗಳಲ್ಲಿ ತುಳಸೀದಳಗಳು! ನವರತ್ನಗಳ ಸರಗಳಿದ್ದ ಕೊರಳಲ್ಲಿ ತುಳಸೀಮಾಲೆ! ವಜ್ರದುಂಗುರಗಳಿದ್ದ ಬೆರಳುಗಳಲ್ಲಿ ಚಿಟಕಿಗಳು! ಪೀತಾಂಬರದಿಂದ ಮುಚ್ಚಿಕೊಂಡಿದ್ದ ಶರೀರದಲ್ಲಿ ಕಾವಿಬಟ್ಟೆ! ಹಣದ ಕಿಣಿಕಿಣಿ ನಿನಾದಕ್ಕೆ ಬದಲಾಗಿ ಈ ಏಕನಾದ! ಲಕ್ಷ್ಮಿವೃತ್ತಿಯ ಲಾಲಸೆಗೆ ಬದಲಾಗಿ ಭಿಕ್ಷಾವೃತ್ತಿಯ ಹಂಬಲ! ಏನಿದೆಲ್ಲಾ ಆಕೃತಿಗಳು?

ನಾ: ಗುರುದೇವ! ಗಾಯದ ಮೇಲೆ ಪುನಃ ಬರೆಯೇ? ಜಿಪುಣತನದಿಂದ ಹಿಂದೆ ತಮ್ಮನ್ನು ತಿರಸ್ಕರಿಸಿರಬಹುದು. ವೈರಾಗಿಯೆಂದು ತಾತ್ಸಾರ ದೃಷ್ಟಿಯನ್ನು ಬೀರಿರಬಹುದು. ಅದೆಲ್ಲವನ್ನು ಕ್ಷಮಿಸಿರಿ. ತಾವು ಷಡ್ವೈರಿಗಳನ್ನು ನಿಗ್ರಹಿಸಿದವರು. ಗುರುಪುಂಗವ! ಅಪರಾಧಗಳನ್ನೆಲ್ಲ ಕ್ಷಮಿಸಿ ಪರಮಾತ್ಮನ ದರ್ಶನವಾಗುವಂತೆ ಅನುಗ್ರಹಿಸಿರಿ.

ವ್ಯಾಸ: ಯೋಗ್ಯವಾದ ಪಥ! ಸಮೀಚೀನವಾದ ಮಾರ್ಗ! ಜೀವನದ ಕ್ಷಣಿಕವಸ್ತುಗಳಲ್ಲಿ ಜಿಹಾಸೆ ಬಂದು ಭಗವಂತನ ಸಾಕ್ಷಾತ್ಕಾರವಾಗಬೇಕೆಂಬ ಬಯಕೆಯೇ ನಿಜವಾದ ವೈರಾಗ್ಯ! ಅದೇ ಮುಕ್ತಿಗೆ ದಾರಿ. ನಾಯಕ! ನೀನೇನೋ ಸಾಮಾನ್ಯನಲ್ಲ! ದೇವಾಂಶದಿಂದಲೇ ನೀನು ಸಂಭವಿಸಿದವ; ಶ್ರೀಕೃಷ್ಣನ ದರ್ಶನ ಹೆಚ್ಚು ದೂರವಿಲ್ಲ ನಿನಗೆ! ಇದೇ ರೀತಿ ಪರಮಾತ್ಮನನ್ನು ಚಿಂತಿಸುತ್ತಾ ನಡೆ ಮುಂದೆ. ನಿನ್ನಂತಹ ಭಕ್ತರ ಉದ್ಧಾರಕ್ಕೆಂದು ಶ್ರೀಕೃಷ್ಣನೇ ಕಾದು ನಿಂತಿರುವನು ನೋಡು. ಇದಕ್ಕಿಂತಲೂ ಮಿಗಿಲಾದ ಭಾಗ್ಯ ಉಂಟೆ?

ನಾ: ಗುರುಗಳ ಅನುಗ್ರಹ. (ಫರದೆ ಬೀಳುವುದು.)

---

ಪುರಂದರದಾಸರ ಪೂರ್ವಾಶ್ರಮದ ಹೆಸರು "ಕೃಷ್ಣಪ್ಪ ನಾಯಕ" ಎಂದೂ ಉಲ್ಲೇಖವಿದೆ. —ಸಂ। ಒಂದಾಣೆ ಮಾಲೆ.

## ದೃಶ್ಯ ೧೧.

[ಪಂಢರಾಪುರದ ಪಾಂಡುರಂಗನ ಮೂರ್ತಿ. ನಾಯಕರು ಭಕ್ತಿ ಭಾವದಿಂದ ಸ್ತುತಿಸುತ್ತಿರುವರು.]

ನಾ: ಅನಂತಕೋಟಿ ಬ್ರಹ್ಮಾಂಡ ನಾಯಕ, ರಮಾ ಬ್ರಹ್ಮ ರುದ್ರೇಂದ್ರಾದಿ ವಂದ್ಯ! ಭಕ್ತವತ್ಸಲ, ಭವರೋಗ ವೈದ್ಯ, ಶರಣಾಗತ ವಜ್ರಪಂಜರ! ಆಪದ್ಬಾಂಧವ ಅನಾಥಬಂಧೋ! ಅನಿಮಿತ್ತಬಂಧೋ, ಮಹಾದುರಿತ ನಿವಾರಣ, ಮಹಾಬಂಧ ವಿಮೋಚನ, ಮುಕ್ತಾಮುಕ್ತನಿಯಾಮಕ, ನೀಲ ಮೇಘಶ್ಯಾಮ! ಅನಂತಾನಂತ ಶಬ್ದವಾಚ್ಯ,ಶಂಖ ಚಕ್ರ ಪೀತಾಂಬರಧಾರೀ, ಕಂಸಾರೀ, ಅಸುರಾರೀ, ಶ್ರೀರಮಣ, ಭೂರಮಣ, ಭಾರತೀರಮಣ, ದುರ್ಗಾರಮಣ, ಶ್ರೀ ಲಕ್ಷ್ಮೀವೆಂಕಟರಮಣ, ಪುಂಡರೀಕ ವರದ ಪಾಂಡುರಂಗ ವಿಠಲ, ಜಯತು, ಜಯತ! (ಸಾಷ್ಟಾಂಗ ವಂದಿಸುವರು)

ವಿಠಲಮೂರ್ತಿ: ಎದ್ದೇಳು ಕಂದ! ಕಡುಲೋಭಿಯಾಗಿ, ಗರ್ವಿತ ಜೀವನವನ್ನು ನಡೆಸಿ ಸಾಮಾನ್ಯರಲ್ಲಿ ಸಾಮಾನ್ಯನಾಗಿ, ಯಃಕಶ್ಚಿತ್ ಮಾನವನಾಗಿ ಬಾಳುವುದಕ್ಕಿಂತ ಲೋಕೋಪಕಾರಿಯಾಗಿ, ಮಿಗಿಲಾದ ಕೀರ್ತಿಶಾಲಿಯಾಗಿ ಭಕ್ತಜನ ಮಂದಾರವಾಗಿ ಬಾಳು' ಎಂದು ನಿನ್ನನ್ನು ಎಚ್ಚರಿಸಿದೆ. ಇಂದಿನಿಂದ ನೀನು ಪುರಂದರದಾಸನಾಗಿ ಭಕ್ತಿಗೀತೆಗಳನ್ನು ಹಾಡುತ್ತ ಜನಮನದ ಕಲ್ಮಷವನ್ನು ದೂರೀಕರಿಸು. ಜೀವನದ ಸಾಫಲ್ಯವನ್ನು ಮನಗಾಣಿಸು. ಇದೇ ನಾನು ನಿನಗಿತ್ತ ಕರ್ತವ್ಯ.

ಸಮಸ್ತ ಸನ್ಮಂಗಲಾನಿ ಭವಂತು. ಮಂಗಳಂ.

(ಪರದೆ ನಿಧಾನವಾಗಿ ಇಳಿಯುವುದು.)

[ದಿನಾಂಕ ೨೨-೧೨-೧೯೫೬ರಲ್ಲಿ ವಿದ್ಯಾದಾಯಿನೀ ಹೈಸ್ಕೂಲಿನ ವಾರ್ಷಿಕೋತ್ಸವ ಸಮಾರಂಭದಂದು ಅಭಿನಯಿಸಲ್ಪಟ್ಟಿದು. ಗ್ರಂಥವಿಸ್ತಾರ ಭಯದಿಂದ ಹಾಡುಗಳನ್ನು ಸೇರಿಸಿಲ್ಲ.]



Edited, Printed & Published by K. V. Shenoy
at the Prabhat Printers, Ltd., Mangalore.